# ಕಾಯಕ ತತ್ವ

ಪಿ. ವಿ. ನಾರಾಯಣ

ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

**Kayaka Tatva** : by Dr. P. V. Narayana, Head of th
Department of Kannada, Vijaya College, Bangalore
Published by Bangalore University, Bangalore.
Pp 56+viii



ಮೊದಲ ಮುದ್ರಣ 1974
ಎರಡನೆ ಮುದ್ರಣ 1985

ಪ್ರಕಾಶಕರು :
ಡಾ. ಕೆ. ಮರುಳಸಿದ್ಧಪ್ಪ
ನಿರ್ದೇಶಕರು
ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 560056

ಬೆಲೆ : 50 ಪೈಸೆ

ಮುದ್ರಣ :
ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ, ಬೆಂಗಳೂರು

## ಮುನ್ನುಡಿ

ವಿಶ್ವವಿದ್ಯಾಲಯಗಳು ಕೇವಲ ತಿಳುವಳಿಕೆಯ ಕೇಂದ್ರಗಳಾದರೆ ಸಾಲದು. ಅವು ಸುತ್ತಮುತ್ತಲಿನ ಜನತೆಯ ಶೈಕ್ಷಣಿಕ-ಸಾಂಸ್ಕೃತಿಕ ಆಗುಹೋಗುಗಳಲ್ಲಿ ಸಹ ಸಕ್ರಿಯವಾಗಿ ಪಾಲ್ಗೊಳ್ಳುವುದು ಆವಶ್ಯಕ. ಪಾಠ ಪ್ರವಚನ, ಉನ್ನತ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ಮಾತ್ರ ವಿಶ್ವವಿದ್ಯಾಲಯಗಳ ಕಾರ್ಯವ್ಯಾಪ್ತಿ ಸೀಮಿತವಾಗಿರಬಾರದು. ಸಾಮಾನ್ಯ ಜನತೆಯಲ್ಲಿ ಅರಿವಿನ ಸಿರಿಯನ್ನು ಹಂಚುವ ಹೊಣೆ ಹೊತ್ತು ವಿಶ್ವವಿದ್ಯಾಲಯಗಳು ಜ್ಞಾನ ಪ್ರಸಾರ ಕೇಂದ್ರಗಳಾಗಿ ಮುನ್ನಡೆಯಬೇಕು.

ಬೆಂಗಳೂರು ವಿಶ್ವವಿದ್ಯಾಲಯವು ಕಳೆದ ಹಲವಾರು ವರ್ಷಗಳಿಂದ ನಗರದ ನಾನಾ ಸಂಘ ಸಂಸ್ಥೆಗಳಲ್ಲಿ, ಕಾರ್ಖಾನೆ ಕಾರ್ಮಿಕ ಕೂಟಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸುತ್ತ ಬಂದಿದೆ. ಅತ್ಯಧಿಕ ಸಂಖ್ಯೆಯಲ್ಲಿ, ನಮ್ಮ ಜನತೆಯ ಕೈಸೇರಲೆಂದು ಈ ಕಿರು ಹೊತ್ತಿಗೆಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸುತ್ತಿದ್ದೇವೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಶ್ರೀಮಂತಿಕೆಯನ್ನು ಹೆಚ್ಚಿಸಿ, ಜನಸಾಮಾನ್ಯರ ತಿಳಿವನ್ನು ಉತ್ತಮಗೊಳಿಸುವ ದಿಸೆಯಲ್ಲಿ ಈ ಹೊತ್ತಿಗೆಗಳು ಸಹಕಾರಿಯಾಗಲೆಂದು ನಾನು ಮನಸಾರೆ ಹಾರೈಸುತ್ತೇನೆ. ಈ ಕೃತಿಯ ಮರು ಪ್ರಕಟಣೆಯಲ್ಲಿ ನೆರವಾದ ಲೇಖಕರಿಗೆ ನಮ್ಮ ಹಾರ್ದಿಕ ವಂದನೆಗಳು.

ಡಿ. ಶಂಕರನಾರಾಯಣ
ಉಪಕುಲಪತಿ
ಬೆಂಗಳೂರು ವಿಶ್ವವಿದ್ಯಾಲಯ

# ಮೊದಲ ಮಾತು

ಈ ಕಿರುಹೊತ್ತಿಗೆಯು ಹನ್ನೆರಡನೆಯ ಶತಮಾನದ ಸುಮಾರಿನಲ್ಲಿ ಉದಯಿಸಿದ ವಚನಕಾರರ ಮಹತ್ವದ ಕಾಣಿಕೆಯಾದ **'ಕಾಯಕ ತತ್ವ'** ವನ್ನು ವಿವರಿಸುವ ಪ್ರಯತ್ನವಾಗಿದೆ. ವಚನ ಸಾಹಿತ್ಯದ ಬಗ್ಗೆ ನಾನು ವಿಶೇಷ ಅಧ್ಯಯನವನ್ನು ಮಾಡುವ ಸಂದರ್ಭದಲ್ಲಿ ಈ ವಿಷಯದ ಬಗ್ಗೆ ಬೇರೆಯೇ ಒಂದು ಕಿರು ಹೊತ್ತಿಗೆಯನ್ನು ಬರೆಯುವ ಹಂಬಲವುಂಟಾಯಿತು ; ವಚನ ಸಾಹಿತ್ಯವನ್ನು ಕುರಿತು ಮಾಡಿದ ನನ್ನ ಅಧ್ಯಯನದ ಒಂದು ಉಪ-ಉತ್ಪನ್ನವಾಗಿ ಇದು ಈಗ ಪ್ರಕಟವಾಗುತ್ತಿದೆ. ವಚನ ಸಾಹಿತ್ಯದ ಬಗ್ಗೆ ನನ್ನ ಆಸಕ್ತಿಯನ್ನು ಹೆಚ್ಚಿಸಿ, ನನ್ನ ಗಮನ ಅಧ್ಯಯನಗಳು ಈ ದಿಸೆಯಲ್ಲಿ ಕಾರ್ಯ ಪ್ರವೃತ್ತನಾಗುವಂತೆ ಪ್ರೇರಿಸಿದ ನನ್ನ ವಿದ್ಯಾಗುರುಗಳಾದ ಡಾ॥ ಎಂ. ಚಿದಾನಂದ ಮೂರ್ತಿಯವರನ್ನು ಇಲ್ಲಿ ನೆನೆಯಬೇಕಾದುದು ನನ್ನ ಕರ್ತವ್ಯ ವಾಗಿದೆ. ಇದನ್ನು ಪ್ರಕಟಿಸುತ್ತಿರುವ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ವಿಭಾಗದ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಕೆ. ಸಿ. ಶಿವಪ್ಪ ಅವರಿಗೂ, ಈ ಪುಸ್ತಕವನ್ನು ಸುಂದರವಾಗಿ ಮುದ್ರಿಸಿರುವ ಬೆಂಗಳೂರು ವಿಶ್ವವಿದ್ಯಾಲಯದ ಮುದ್ರಣಾಲಯದವರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಪಿ. ವಿ. ನಾರಾಯಣ**

## ಲೇಖಕರ ನುಡಿ

ಹನ್ನೊಂದು ವರ್ಷಗಳ ಹಿಂದೆ ಮೊದಲ ಬಾರಿ ಮುದ್ರಣಗೊಂಡ ಈ ಪುಸ್ತಿಕೆಯು ಈಗ ಎರಡನೆಯ ಮುದ್ರಣ ಕಾಣುತ್ತಿರುವುದು ಸಂತೋಷವಾದ ವಿಷಯ. ಈ ಪುಸ್ತಿಕೆಯು ಮುಖ್ಯವಾಗಿ ಕಾಯಕದ ವಿಷಯವನ್ನು ವಚನಕಾರರ ಮಾತು–ಭಾವನೆಗಳಿಗನುಸಾರವಾಗಿ ವಿವರಿಸುವ ಪ್ರಯತ್ನವಾಗಿದೆ. ವೈಚಾರಿಕ ಒರೆಗಲ್ಲಿಗೆ ತೀಡಿ ಈ ತತ್ವವನ್ನು ಇನ್ನಷ್ಟು ತೀಕ್ಷ್ಣ ವಿಮರ್ಶೆಗೆ ಗುರಿಪಡಿಸಬೇಕಾದದ್ದು ಆವಶ್ಯಕವೆನಿಸಿದರೂ, ಆಗ ಲೇಖನವನ್ನು ಆಮೂಲಾಗ್ರವಾಗಿ ಪರಿಷ್ಕರಿಸಬೇಕಾಗಿದ್ದುದರಿಂದ, ಕಾಲಮಿತಿಯಿಂದಾಗಿ ಆ ಕೆಲಸವನ್ನು ಈಗ ಮಾಡಿಲ್ಲ. ಅಲ್ಲದೆ ಹೆಚ್ಚು ಸಾಮಾನ್ಯ ಜನರನ್ನು ತಲುಪುವ ಈ ಪುಸ್ತಿಕೆಯಲ್ಲಿ ವಚನಕಾರರ ಭಾವನೆಗಳಿಗೇ ಪ್ರಾಮುಖ್ಯವಿರಬೇಕಾದದ್ದು ಸಮಂಜಸವೆನಿಸಿದುದರಿಂದಲೂ ಪರಿಷ್ಕರಣಕ್ಕೆ ಕೈಹಾಕಲಿಲ್ಲ. ಎರಡನೆಯ ಮುದ್ರಣ ಕಾರ್ಯದಲ್ಲಿ ಆಸಕ್ತಿ ವಹಿಸಿದ ಪ್ರಸಾರಾಂಗದ ನಿರ್ದೇಶಕರಾದ ಡಾ॥ ಕೆ. ಮರುಳಸಿದ್ದಪ್ಪನವರಿಗೂ ಸಿಬ್ಬಂದಿವರ್ಗದವರಿಗೂ ನಾನು ಕೃತಜ್ಞ.

5–9–1985 **ಪಿ. ವಿ. ನಾರಾಯಣ**

ಪ ರಿ ವಿ ಡಿ

# ಹಿನ್ನೆಲೆ

ಕನ್ನಡನಾಡಿನಲ್ಲಿ ವಚನ ರಚನೆಯ ಕಾಲದಲ್ಲಿ ನಡೆದ ಚಳು ವಳಿಯು ಮೈದಳೆದೆದ್ದ ರೀತಿಯ ಹೊಸ ಜೀವನವಿಧಾನ ವೊಂದನ್ನು ಪ್ರಸಾರಗೊಳಿಸಿತು. ಅದಕ್ಕೆ ಹಿಂದಿನ ಜೀವನವನ್ನು ಅವಲೋಕಿಸಿದರೆ ಅದೊಂದು ಪರಂಪರಾಗತವಾಗಿ ಬಂದ, ಹೊಸ ಗಾಳಿ ಸುಳಿಯದೆ ಜಡ್ಡಾದ ರೀತಿಯದೆಂಬುದು ತಿಳಿಯುತ್ತದೆ ಸಾಮಾಜಿಕ ಜೀವನದಲ್ಲಿನ ವ್ಯವಸ್ಥೆಯನ್ನು ಗಮನಿಸಿದರೆ, ಅಲ್ಲಿ ವ್ಯಕ್ತಿತ್ವ ವಿಕಾಸಕ್ಕೆ ಎಲ್ಲರಿಗೂ ಸಮಾನವಾದ ಅವಕಾಶಗಳಿರದೆ, ಹಲವಾರು ವರ್ಗಗಳಿದ್ದುದರಿಂದಾಗಿ ಮತ್ತು ಅವುಗಳಲ್ಲಿ ಪರಸ್ಪರ ಸಂಪರ್ಕವಿಲ್ಲದಿದ್ದುದರಿಂದ ಒಟ್ಟು ಜೀವನವು ತುಂಬ ಶಿಥಿಲ ವಾದುದಾಗಿತ್ತು. ಜಾತಿಪದ್ಧತಿಯು ರೂಪುಗೊಳ್ಳಲು ಯಾವ ಸಮರ್ಥನೀಯ ಕಾರಣಗಳೇ ಇದ್ದಿರಲಿ, ವಚನಕಾಲದಲ್ಲಿ ಎಂದರೆ ಕ್ರಿ.ಶ. ಹನ್ನೆರಡನೆಯ ಶತಮಾನದ ಸರಿಸುಮಾರಿನಲ್ಲಿ, ಅದು ಕೇವಲ ಸಾಂಪ್ರದಾಯಿಕವೂ ಹುಟ್ಟಿನಮೇಲೆ ಮಾತ್ರವೇ ನಿರ್ಧ ರಿತವಾಗುವ ವಿಷಯವೂ ಆಗಿದ್ದು, ಒಬ್ಬನು ತಾನು ಹುಟ್ಟಿದ ಜಾತಿಯಲ್ಲಿಯೇ ಕೊನೆಯವರೆಗೂ ಉಳಿಯಬೇಕಾದಂತಹ ಪರಿಸ್ಥಿತಿಯಿತ್ತು. ಆದರೆ ಈ ಜಾತಿಯೆಂಬುದು ಕೇವಲ ವಿಭಾ ಗಾನುಕೂಲ ವ್ಯವಸ್ಥೆಯಾಗಿರದೆ ಜಾತಿಯೊಂದಿಗೆ ಹಲವಾರು ಸವಲತ್ತುಗಳೂ ಬದುಕಿನ ಮಾರ್ಗಗಳೂ ಸೇರಿದ್ದುದರಿಂದ ಮೇಲುಜಾತಿಯ ವ್ಯಕ್ತಿಯೊಬ್ಬನು ತನ್ನ ಜಾತಿಯ ಬಗ್ಗೆ ಹೆಮ್ಮೆ

ಪಡುವಂತೆ ಕೆಳಜಾತಿಯಲ್ಲಿ ಹುಟ್ಟಿದವನು ಸಂತೃಪ್ತನಾಗಿರುವಂತಿರಲಿಲ್ಲ. ಈ ಜಾತಿಗಳು ಮನುಷ್ಯರಲ್ಲಿ ತರತಮಭೇದವನ್ನುಂಟುಮಾಡಿ ಮೇಲುಜಾತಿಯವರು ಕೆಳಜಾತಿಯವರನ್ನು ಜ್ಞಾನಾರ್ಜನೆಗಾಗಲೀ, ಆತ್ಮವಿಕಾಸಕ್ಕಾಗಲೀ, ರಾಜಕೀಯವಾಗಿ ಉನ್ನತವಾದ ಹುದ್ದೆಗಳಿಗಾಗಲೀ ಅನರ್ಹರಾದವರೆಂದು ಭಾವಿಸಿದ್ದರು. ಎಂದರೆ ವ್ಯಕ್ತಿಯ ವ್ಯಕ್ತಿತ್ವವಿಕಾಸವು ಕೆಲವರಿಗೆ ಮಾತ್ರ ಮೀಸಲೆಂಬಂತೆ ಪರಿಗಣಿಸಲ್ಪಟ್ಟಿದ್ದುದರಿಂದ, ಅದು ಸ್ವಂತಸಾಧನೆಗಿಂತ ಹೆಚ್ಚಾಗಿ ವ್ಯಕ್ತಿಯ ಹುಟ್ಟಿನ ಮೇಲೆ ನಿರ್ಧಾರಿತವಾಗಿದ್ದುದು ಆಗಿನ ಸ್ಥಿತಿಯಾಗಿತ್ತು. ಈ ರೀತಿ ಬಹುಪಾಲು ಜನರು ಆಗ, ಹಲವರ ಜಾಣತನದಿಂದ ಉಂಟಾದ ವಾತಾವರಣದಲ್ಲಿ, ಅಂಧಕಾರದಲ್ಲಿಯೇ ಬದುಕಬೇಕಾಗಿದ್ದಿತು.

ಇನ್ನು ಆಗಿನ ಧಾರ್ಮಿಕ ವಾತಾವರಣವನ್ನು ತೆಗೆದುಕೊಂಡರೆ, ಜನರ ಧಾರ್ಮಿಕಾಚರಣೆಗಳಲ್ಲಿ ಧರ್ಮವೆನ್ನಬಹುದಾದುದರ ಅಂಶಕ್ಕಿಂತ ಇತರ ಅಂಶಗಳೇ ಬಹು ಮಿಗಿಲಾಗಿದ್ದುವು;ಆಗಿನ ಧಾರ್ಮಿಕ ವಾತಾವರಣವು ವಾಮಾಚಾರದಂತಹ, ಸಾಮಾನ್ಯವಾಗಿ ಧರ್ಮಬಾಹಿರವೆಂದು ಪರಿಗಣಿತವಾದ,ಆಚರಣೆಗಳಿಂದ ಕಲುಷಿತವಾಗಿತ್ತು. ಪ್ರಾಣಿಹಿಂಸೆಯನ್ನೂ, ಜಾತಿಪದ್ಧತಿಯನ್ನೂ ವಿರೋಧಿಸಿದ್ದ ಬೌದ್ಧಧರ್ಮವು ಈಹೊತ್ತಿಗೆ ಕನ್ನಡನಾಡಿನಿಂದಲೇ ಏಕೆ ಭಾರತದಿಂದಲೇ ಬಹುಪಾಲು ಕಣ್ಮರೆಯಾಗಿಹೋಗಿತ್ತು; ಅಲ್ಲಲ್ಲಿ ಕಾಣಬರುತ್ತಿದ್ದ ಬೌದ್ಧಾನುಯಾಯಿಗಳಾದರೋ ವಜ್ರಯಾನಪಂಥದ ಅನುಯಾಯಿಗಳಾಗಿ ತಾಂತ್ರಿಕಾಚರಣೆಗಳಲ್ಲಿ ತೊಡಗಿದ್ದವರು. ಜೈನಧರ್ಮವು ತಾಂತ್ರಿಕತೆಯೆಡೆಗೆ ತಿರುಗದಿದ್ದರೂ ಅತಿ ನಿಷ್ಠುರವೂ ಆಚರಣದೂರವೂ ಆದ ಕಷ್ಟಕರ ನಿಬಂಧನೆಗಳನ್ನು ಸಾಧಕರಮೇಲೆ ಹೇರಿ ಆತ್ಮೋ

ದ್ಧರವು ಸಾಮಾನ್ಯ ಜನತೆಗೆ ಅಸಾಧ್ಯವೆಂಬ ಭಾವನೆಯನ್ನು ಬೇರೂರಿಸಿದ್ದಿತು. ಆಗಿನ ಶೈವಪಂಥಗಳೂ ಅನೇಕ ಬೀಭತ್ಸಕರ ಆಚರಣೆಗಳಲ್ಲಿ ತೊಡಗಿದ್ದುವು. ಕೌಳರೆಂಬ ಶಕ್ತಿಪೂಜಕ ಪಂಥವೊಂದು ಪ್ರಾಣಿಬಲಿ ಮದ್ಯಪಾನಗಳನ್ನೇ ಪೂಜೆಯೆಂದು ಭ್ರಮಿಸಿ ಅದಕ್ಕನುಗುಣವಾದ ಆಚರಣೆಗಳನ್ನು ಅನುಸರಿಸುತ್ತಿದ್ದರು. ಕೌಳರು ಒಂದುಕಡೆ ಲಿಂಗಪೂಜೆಯನ್ನು ಮಾಡಿದರೆ, ಮತ್ತೊಂದೆಡೆಯಲ್ಲಿ ಬಲಿಗಾಗಿ ಕುರಿಯನ್ನು ಎಳೆದೊಯ್ಯುತ್ತಿದ್ದುದನ್ನು ಬ್ರಹ್ಮಶಿವನೆಂಬ ಈ ಕಾಲದ ಕವಿಯೊಬ್ಬನು ಹಾಸ್ಯಮಾಡುತ್ತಾನೆ. ಅಲ್ಲದೆ ಶಕ್ತಿಪೂಜಕರಾಗಿದ್ದ ಈ ಕೌಳರಿಗೆ ಮದ್ಯ, ಮಾಂಸ, ಮತ್ಸ್ಯ, ಮುದ್ರಾ, ಮೈಥುನಗಳೇ ಅತ್ಯಂತ ಪವಿತ್ರವಾದ ಪಂಚಮಕಾರಗಳೆನಿಸಿದ್ದುವು; ಸ್ತ್ರೀಯೋನಿಯನ್ನೇ ಅವರು ಪೂಜಿಸುತ್ತಿದ್ದರು! ಬ್ರಹ್ಮವಿಷ್ಣುಗಳು ಪುಣ್ಯಕಾರ್ಯ-ವೈದಿಕಕರ್ಮಗಳಿಂದ ಮೋಕ್ಷವು ಲಭಿಸುವುದೆಂದು ಹೇಳಿದರೆ ಉಮೆಯ ಪ್ರಿಯತಮನಾದ ಶಿವನು ಮಾತ್ರ ಮದ್ಯ-ಮೈಥುನಗಳ ಮೂಲಕ ಮೋಕ್ಷಸಾಧನೆಯನ್ನು ಬೋಧಿಸುವನೆಂದು ಈ ಕಾಲದ ಸಂಸ್ಕೃತ ನಾಟಕವಾದ 'ಕರ್ಪೂರ ಮಂಜರಿ'ಯಲ್ಲಿ ಬರುವ ಕೌಳಸನ್ಯಾಸಿಯೊಬ್ಬನು ಹೆಮ್ಮೆಪಡುತ್ತಾನೆ. ಕಾಪಾಲಿಕರೂ ತಾಂತ್ರಿಕಾಚರಣೆಯ ಶೈವರೇ : ''ಹಠಯೋಗ ಲಂಬಿಕೆಯೆಂದು, ಆಕುಂಚನವೆಂದು, ವಜ್ರಿ ಅಮರಿಯ ಕಲ್ಪವೆಂದು ಮಲಮೂತ್ರಂಗಳಂ ಸೇವಿಸುತ, ಇದು ಪೂರ್ವನವನಾಥಸಿದ್ಧರ ಮತೋಕ್ತವೆಂದು ಕಾಪಾಲಿಕಾಚರಣೆಯನಾಚರಿಸುವವರಲ್ಲ ಶರಣರು ! ಮೇಣು ತಲೆಯೊಳಗಣ ವಾತಪಿತ್ತಶ್ಲೇಷ್ಮವ ತೆಗೆದು ಅಮೃತವೆಂದು ಬಿನುಗುದೃಷ್ಟವ ತೋರುವರಲ್ಲ ಶರಣರು'' ಎಂಬ ಅಲ್ಲಮಪ್ರಭುವಿನ ಮಾತಿನಲ್ಲಿ ಕಾಪಾಲಿಕರು

ಮಲಮೂತ್ರ ಶ್ಲೇಷ್ಮಗಳನ್ನೇ ತಮಗೆ ಪೂಜ್ಯರಾದ ನವನಾಥ ಸಿದ್ಧರ ಪ್ರಸಾದವೆಂದು ಭಾವಿಸಿ ಸೇವಿಸುತ್ತಿದ್ದ ಅಸಹ್ಯಕರ ಪದ್ಧತಿಯೂ ಉಲ್ಲೇಖಗೊಂಡಿದೆ. ಕಾಪಾಲಿಕಶಾಖೆಯಾದ ಭೈರವ ಪಂಥದವರು ಕೊರಳಿನಲ್ಲಿ ಎಲುಬುಗಳ ಹಾರವನ್ನು ಧರಿಸಿ, ಕೈಯಲ್ಲಿ ನರಕಪಾಲವನ್ನು ಹಿಡಿದು ಶ್ಮಶಾನದಲ್ಲಿ ವಾಸಿಸುತ್ತ ತಾವು ಮೋಕ್ಷ ಸಾಧನೆಯಲ್ಲಿ ತೊಡಗಿದ್ದೇವೆಂದು ಹೃತ್ಪೂರ್ವಕವಾಗಿ ನಂಬಿದ್ದರು. ನಾಥಪಂಥದವರು ವಜ್ರಕಾಯವನ್ನು ಗಳಿಸುವ ಭ್ರಮೆಯಿಂದ ಪಾದರಸ–ಅಭ್ರಕ ಮುಂತಾದ ದ್ರವ್ಯಗಳಿಂದ ಕೂಡಿದ ಗುಳಿಗೆಗಳನ್ನು ತಯಾರಿಸಿ ಮಾರುತ್ತಿದ್ದರು, ಅವುಗಳ ಸೇವನೆಯಿಂದ ದೇಹವು ಅಮರವಾಗುವುದೆಂದು ಬೋಧಿಸುತ್ತಿದ್ದರು.

ಹೀಗೆ ಅಸಮಾನಾವಕಾಶಗಳಿದ್ದ ಸಾಮಾಜಿಕ ವ್ಯವಸ್ಥೆಯೂ ಕಲುಷಿತಗೊಂಡ ಧಾರ್ಮಿಕ ವಾತಾವರಣವೂ ಪ್ರಚಲಿತವಾಗಿದ್ದ ಆ ಸಮಯದಲ್ಲಿ ಕನ್ನಡ ನಾಡಿನಲ್ಲಿ ಜನ್ಮ ತಳೆದ ಕೆಲವು ಶರಣರು ಇವುಗಳನ್ನು ಕಂಡು ನೊಂದು ಕೇವಲ ಭಕ್ತಿಪ್ರಧಾನವೂ ಶುದ್ಧ-ಸಾತ್ವಿಕವೂ ಶಿವಪಾರಮ್ಯವನ್ನು ಬೋಧಿಸುವಂತಹುದೂ ಆದ ವೀರಶೈವ ಧರ್ಮವನ್ನು ಪ್ರಸಾರಗೊಳಿಸಲು ತೊಡಗಿದರು. ಹರಿಹರನ ನಿರೂಪಣೆಯನ್ನು ನಂಬಬಹುದಾದರೆ ಶೈವಬ್ರಾಹ್ಮಣನ ಮಗನಾದ ಬಸವಣ್ಣನು ತನ್ನ "ಕರ್ಮಲತೆಯಂತಿದ್ದ" ಜನಿವಾರವನ್ನು ಕಿತ್ತೆಸೆದು ವೀರಶೈವನಾಗುತ್ತಾನೆ; ಆದರೆ ಬಸವಣ್ಣನು ವೀರಶೈವದೀಕ್ಷೆಯನ್ನು ಎಲ್ಲಿ ಯಾರಿಂದ ಪಡೆದನೆಂಬುವುದಕ್ಕೆ ನಮಗೆ ಯಾವ ಸ್ಪಷ್ಟವಾದ ಉಲ್ಲೇಖಗಳೂ ದೊರೆಯುವುದಿಲ್ಲ. ಇವನು ಕಲಚುರಿ ಬಿಜ್ಜಳನ ಆಸ್ಥಾನದಲ್ಲಿ ಭಂಡಾರದ ಒಬ್ಬ ಮುಖ್ಯಾಧಿಕಾರಿಯಾಗಿದ್ದುದರಿಂದಲೂ,

ತುಂಬ ವರ್ಚಸ್ವಿಯೂ ಅಪ್ರತಿಮ ಸಂಘಟನಶಾಲಿಯೂ ಆಗಿದ್ದದರಿಂದಲೂ ಬಹುಬೇಗ ಜನತೆಯನ್ನಾಕರ್ಷಿಸಿ ವೀರಶೈವದ ಪ್ರಸಾರಕಾರ್ಯದಲ್ಲಿ ಕೇಂದ್ರವ್ಯಕ್ತಿಯಾಗುತ್ತಾನೆ. ಇವನ ಈ ಕಾರ್ಯದಲ್ಲಿ ವೀರವಿರಾಗಿಯೂ ನಾಥಪಂಥದ ಒಳ – ಹೊರಗನ್ನರಿತಿದ್ದರೂ ಸಾತ್ವಿಕತೆಯನ್ನು ಪ್ರತಿಪಾದಿಸಿದ ಅಲ್ಲಮಪ್ರಭು ಹಾಗೂ ಬಸವಣ್ಣನ ಸೋದರಳಿಯನೂ ಅಪಾರ ಬುದ್ಧಿಶಾಲಿಯೂ ವೀರಶೈವಕ್ಕೆ ನಿರ್ದಿಷ್ಟ ಧಾರ್ಮಿಕ ರೂಪುರೇಷೆಗಳನಿತ್ತ ಚನ್ನಬಸವಣ್ಣ ಇವರು ಮುಖ್ಯರಾದ ಬೆಂಬಲಿಗರಾಗಿದ್ದರು.

ಬಸವಣ್ಣ ಮುಂತಾದವರು ವೀರಶೈವವನ್ನು ಕೆಲವು ಮಾರ್ಪಾಟುಗಳೊಡನೆ ಜನಪ್ರಿಯಗೊಳಿಸಿದವರು ಮಾತ್ರ. ಇವರಿಗೆ ಕೆಲವು ದಶಕಗಳ ಕಾಲ ಹಿಂದಿದ್ದ ಜೇಡರ ದಾಸಿಮಯ್ಯನ ಕಾಲಕ್ಕಾಗಲೇ ವೀರಶೈವವು ಕನ್ನಡ ನಾಡಿನಲ್ಲಿ ಪ್ರಚಲಿತವಾಗಿದ್ದುದು ಸ್ಪಷ್ಟ. ಆದರೆ ಇವನಿಗೂ ಹಿಂದೆ ವೀರಶೈವವು ಇದ್ದಿತೆ, ಇದ್ದಿದ್ದರೆ ಅದರ ಪ್ರಾಚೀನತೆಯೆಷ್ಟು, ಅದರ ಸ್ಥಾಪಕನಾರು ಮುಂತಾದ ವಿಷಯಗಳ ಬಗ್ಗೆ ಅನೇಕ ವಾದಗಳಿದ್ದರೂ ಯಾವೊಂದನ್ನೂ ಸಮರ್ಪಕವಾದುದೆಂದು ಸ್ವೀಕರಿಸುವಂತಿಲ್ಲ. ವೀರಶೈವವು ತನ್ನ ಹಿಂದೆ ಇದ್ದ ಜಡಮತಗಳ ವಿರುದ್ಧ ಬಂಡೆದ್ದು ಮೂಡಿಬಂದ ಮತದಂತೆ ಕಾಣುತ್ತದೆ. ಶಿವನು ಮೂಲತಃ ದ್ರಾವಿಡದೈವವಾದರೂ ಮುಂದೆ ಆರ್ಯಪ್ರಾಬಲ್ಯದ ಕಾಲದಲ್ಲಿ ವೇದಗಳಲ್ಲಿ ಉಕ್ತನಾದ ರುದ್ರನೊಡನೆ ತಾದಾತ್ಮ್ಯ ಹೊಂದಿದಾಗ ಶೈವವೂ ವೇದಪ್ರಾಮಾಣ್ಯವನ್ನಂಗೀಕರಿಸಿತು; ಈ ಬೆರಕೆಯನ್ನು ಸಹಿಸದೆ ಸ್ವಸ್ವರೂಪವನ್ನುಳಿಸಿಕೊಳ್ಳಲು ಮಾಡಿದ ಪ್ರತಿಭಟನಾತ್ಮಕ

ಪ್ರಯತ್ನದಿಂದಲೇ ವೀರಶೈವವು ರೂಪುಗೊಂಡಿತೆಂದು ಕೆಲವು ವಿದ್ವಾಂಸರು ಭಾವಿಸುತ್ತಾರೆ. ಆದರೆ ಮತ್ತೆ ಕೆಲವರು, ವೀರ ಶೈವವು ತಾಂತ್ರಿಕ ಮತಗಳ ಭೀಕರವಾದ ಆಚರಣೆಗಳನ್ನು ಕಂಡು ಜಿಗುಪ್ಸೆಗೊಂಡು ಸಾತ್ವಿಕವೂ ನಿರ್ಮಲಭಕ್ತಿಪ್ರತಿಪಾದಕವೂ ಆದ ಮತವನ್ನು ರೂಪಿಸಲು ಕೆಲವು ಶರಣರು ಮಾಡಿದ ಪ್ರಯ ತ್ನದ ಫಲವೆಂದು ಹೇಳುತ್ತಾರೆ. ಪ್ರಾಯಶಃ ಈ ಎರಡನೆಯ ಅಭಿಪ್ರಾಯವೇ ಸಾಧುವಾದುದೆಂದು ನಮ್ಮ ಭಾವನೆ. ಶೈವದ ಶುದ್ಧತೆಯನ್ನೇ ಪರಮಗುರಿಯನ್ನಾಗಿ ಪಡೆದಿದ್ದರೆ ವೀರಶೈವ ಧರ್ಮದ ವಕ್ತಾರರಾದ ವಚನಕಾರರು ವೇದೋಕ್ತಿಗಳ ಸಹಾಯ ದಿಂದಲೇ ಶಿವಪಾರಮ್ಯವನ್ನು ಸ್ಥಾಪನೆ ಮಾಡಲು ಪ್ರಯತ್ನಿ ಸುತ್ತಿರಲಿಲ್ಲ. ವಚನಕಾರರು ವೈದಿಕ ಧರ್ಮವನ್ನಲ್ಲದೆ ಜೈನ ಬೌದ್ಧ ವೈಷ್ಣವ ಮತಗಳನ್ನೂ ಖಂಡಿಸುತ್ತಾರೆ. ಆದ್ದರಿಂದ ವಚನಕಾರರ ಗಮನವು ಬೀಭತ್ಸಕರ ಮಾರ್ಗಗಳಿಂದ ಮುಕ್ತ ವಾದ ಸಾಧಕಮಾರ್ಗವೊಂದರ ಕಡೆಗಿದ್ದಿತೆಂದು ಹೇಳಬಹುದು,

ವೀರಶೈವವು ಅನೇಕ ರೀತಿಗಳಲ್ಲಿ ಹೊಸದಾದ ದಾರಿ ಯನ್ನು ಕಡಿದು ವಿಶಿಷ್ಟಧರ್ಮವಾಗಿ ರೂಪುಗೊಂಡಿತು ; ಅದ ರಲ್ಲಿ ಹಿಂದಿನ ಶೈವಗಳ ಅನೇಕ ಉತ್ತಮಾಂಶಗಳು ಸೇರ್ಪಡೆ ಯಾಗಿರುವುವಲ್ಲದೆ, ವಚನಕಾರರ ಕಲ್ಪನೆಗನುಣವಾದ ಹೊಸ ಅಂಶಗಳೂ ಸೇರಿವೆ. ಅದುವರೆಗೆ ಜನತೆಯು ಹತ್ತಾರು ಜಾತಿ ಗಳಾಗಿ ಒಡೆದು ಸಾಮಾಜಿಕ ಸಂಪರ್ಕದಿಂದ ಪರಸ್ಪರ ದೂರವಾಗಿ ಒಂದೊಂದು ಜಾತಿಯೂ ಒಂದೊಂದು ದ್ವೀಪವಾಗಿತ್ತು. ಜಾತಿ ಪದ್ಧತಿಯಲ್ಲಿ ಸೇರಿಹೋಗಿದ್ದ ಮೇಲು-ಕೀಳು ಭಾವನೆಯಿಂದ ಅವುಗಳಲ್ಲಿ ವೈಮನಸ್ಯವುಂಟಾಗಿತ್ತು. ವೀರಶೈವ ಧಾರ್ಮಿಕ ನಾಯಕರು ಎಲ್ಲ ಜಾತಿ–ಮತಗಳಿಂದಲೂ ತಮ್ಮ ವಲಯಕ್ಕೆ

ಮತಾಂತರಗೊಳಿಸಿದರು. "ಕುಲದಲ್ಲಿ ಶೂದ್ರನಾದಡೇನು ? ಮನದಲ್ಲಿ ಮಹಾದೇವ ನೆಲೆಗೊಂಡವನೇ ವೀರಶೈವ ನೋಡಾ", "ಚಾಂಡಾಲಂಗೆ ಜ್ಞಾನವಂಕುರಿಸಿದಡೆ ಆತನ ಅಂತರಂಗದ ವೃತ್ತಿಗೆ ಪೂಜ್ಯತೆಯಲ್ಲದೆ ಬಹಿರಂಗ ತನುವಿಗೆ ಪೂಜ್ಯತೆಯಾಗದು", "ಇಂತೀ ಜಾತಿಗೋತ್ರದೊಳಗಾದ ನೀಚ-ಶ್ರೇಷ್ಠವೆಂಬೆರಡುಂ ಕುಲವಲ್ಲದೆ ಹೊಲೆ ಹದಿನೆಂಟು ಜಾತಿ ಎಂಬ ಕುಲವಿಲ್ಲ" ಎಂಬ ಮಾತುಗಳ ಮೂಲಕ ಅನೇಕ ವಚನಕಾರರು ಒಕ್ಕೊರಲಿನಿಂದ ಜಾತಿಪದ್ಧತಿಯನ್ನು ಅಲ್ಲಗಳೆದರು. "ದೇವ, ದೇವಾ, ಬಿನ್ನಪ, ಅವಧಾರು : ವಿಪ್ರ ಮೊದಲು ಅಂತ್ಯಜ ಕಡೆಯಾ। ಶಿವಭಕ್ತರಾದವರನೆಲ್ಲರನೊಂದೇ ಎಂಬೆ ; ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೆಲ್ಲರನೊಂದೆ ಎಂಬೆ" ಎಂಬ ಬಸವಣ್ಣನ ಮಾತು ವೀರಶೈವದ ಆಗಿನ ಸಾಮಾಜಿಕ ಧೋರಣೆಯಾಗಿದ್ದಿತೆಂದು ಭಾವಿಸಬಹುದು. ಪರಮ ಶಿವಭಕ್ತನಾಗಿದ್ದ ಸಂಬೋಳಿಯ ನಾಗಿದೇವನೆಂಬ ಹೊಲೆಯನ ಮನೆಯಲ್ಲಿ ಶಿವಪ್ರಸಾದವನ್ನು ಸ್ವೀಕರಿಸಿದಾಗ ಆತನು ಪ್ರತಿಭಟನೆಯನ್ನೆದುರಿಸಿ, ಶಿವಭಕ್ತನ ಶ್ರೇಷ್ಠತೆಯನ್ನು ಇತರರಿಗೆ ತೋರಿಸಿಕೊಟ್ಟ ಪ್ರಸಂಗವು ಹರಿಹರನ 'ಬಸವರಾಜ ದೇವರ ರಗಳೆ'ಯಲ್ಲಿ ಉಲ್ಲೇಖಗೊಂಡಿದೆ. ಅಷ್ಟೇ ಅಲ್ಲದೆ ಮಧುವಯ್ಯನೆಂಬ ಬ್ರಾಹ್ಮಣ ಹಾಗೂ ಹರಳಯ್ಯನೆಂಬ ಅಂತ್ಯಜ ಇವರೀರ್ವರು ತಮ್ಮ ಮಕ್ಕಳ ವಿವಾಹದ ಮೂಲಕ ರಕ್ತಸಂಬಂಧವನ್ನು ಬೆಳೆಸಲು ಬಸವಣ್ಣನು ಪ್ರೇರಕನಾಗಿ ಆ ಕಾಲದ ಜನರಲ್ಲಿ ದಿಗ್ಭ್ರಮೆಯಾಗಲು ಕಾರಣನಾಗುವ ವಿಷಯವು ಅನೇಕ ವೀರಶೈವ ಪುರಾಣಗಳಲ್ಲಿ ಉಕ್ತವಾಗಿದೆ. ಬಸವಣ್ಣನಿಗಿಂತಲೂ ಕೊಂಚ ಹಿಂದೆ ನೆರೆಯ ತಮಿಳು ನಾಡಿನಲ್ಲಿಜನಿಸಿದ ರಾಮಾನುಜನು ತನ್ನ ಧಾರ್ಮಿಕ ಸುಧಾರಣೆಯಂ

ಕ್ರಮದಲ್ಲಿ ಅಂತ್ಯಜರ ಬಗ್ಗೆ ಅನುಕಂಪೆಯನ್ನು ತೋರಿಸಿದ್ದ ನಾದರೂ ವೈವಾಹಿಕ ಸಂಬಂಧಕ್ಕೆ ಉತ್ತೇಜನ ನೀಡುವಂತಹ ಸುಧಾರಣಾಕಾರ್ಯವು ಅವರೆಗೆ ನಡೆದಿರಲಿಲ್ಲ. ಈ ಬಗೆಯಲ್ಲಿ ಸಾಮಾಜಿಕ ತಾರತಮ್ಯವನ್ನು ಹೋಗಲಾಡಿಸಿ ಸಮಾನಾದರ್ಶ ವನ್ನು ಪಡೆದ ವರ್ಗರಹಿತವಾದ ವ್ಯಾಪಕ ಧಾರ್ಮಿಕ ಪಂಥ ವೊಂದನ್ನು ಸೃಷ್ಟಿಸಲು ವೀರಶೈವವು ಹೆಣಗಿತು.

ಬಸವಾದಿಗಳಿಗೆ ಹಿಂದೆ ಕರ್ಣಾಟಕದ ಜನಜೀವನದಲ್ಲಿ ಕಾಣಬರುತ್ತಿದ್ದ ಮತ್ತೊಂದು ಅಂಶವೆಂದರೆ ಸ್ತ್ರೀ – ಪುರುಷರ ನಡುವೆ ಜನತೆಯು ಮಾಡುತ್ತಿದ್ದ ತಾರತಮ್ಯ. ವೈದಿಕರು ಹಾಗೂ ಜೈನರಲ್ಲಿ ಸ್ತ್ರೀಯು ಎಷ್ಟೇ ಶ್ರೇಷ್ಠಳಾದರೂ ಮೋಕ್ಷಾ ರ್ಹಳಲ್ಲ, ಪುರುಷಜನ್ಮದ ಮೂಲಕವಾಗಿ ಮಾತ್ರವೇ ಅವಳಿಗೆ ಮೋಕ್ಷಸಾಧನೆಯು ಸಾಧ್ಯವೆಂಬ ಭಾವನೆಯು ಆಗ ಬೇರೂರಿ ದ್ದಿತು. "ಎನಿಸುಂ ಜ್ವಳಮಾದೊಡೆ ಚಂದ್ರನ ತೇಜಂ ರವಿಯ ತೇಜಮುಂ ಗೆಲ್ಗುಮೆ? ಪೆಣ್ಣೆನಿತೊಳ್ಳಿದಳಾದಡೆ ಪುರುಷನೊಳಾದ ಮಹಾಗುಣಂಗಳಂ ಪೋಲ್ತಪಳೆ?" ಎಂಬ ನಯಸೇನನ ಮಾತು ಆಗಿನ ಕಾಲದ ಈ ಭಾವನೆಯನ್ನು ಸೂಚಿಸುತ್ತದೆ. ಒಂದೆಡೆ ಸ್ತ್ರೀಯರ ಬಗ್ಗೆ ಈ ಭಾವನೆಯಿದ್ದರೆ, ಮತ್ತೊಂದೆಡೆ ಕೌಲರಂತಹ ಶಕ್ತಿಪೂಜಕರು ಭಕ್ತೆಯರನ್ನು ಆದಿಶಕ್ತಿಸ್ವರೂಪಿ ಗಳೆಂದು ಬಗೆದು ಅವರನ್ನೇ ಪೂಜಿಸುತ್ತಿದ್ದರು. ಈ ಎರಡು ಧ್ರುವಗಳ ನಡುವೆ ವಾಸ್ತವ ನೆಲೆಯಲ್ಲಿ ಆಲೋಚಿಸಿ ಸ್ತ್ರೀಯು ಸಮಾನಾವಕಾಶಗಳಿಗೆ ಅರ್ಹಳೆಂಬುದನ್ನು ಪ್ರತಿಪಾದಿಸಿದವರು ವಚನಕಾರರು. "ಮೊಲೆ ಮುಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು. ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ" ಎಂಬ ಜೇಡರ ದಾಸಿಮಯ್ಯನ ಮಾತು

ಮುಂದೆ ಅನೇಕ ವಚನಕಾರರಲ್ಲಿ ಮಾರ್ದನಿಸಿತು. ಆವರೆಗೂ ಆಧ್ಯಾತ್ಮಿಕವಾಗಿ ಸಾಧನೆ ಮಾಡಲು ಅವಕಾಶವಿಲ್ಲದೆ ಹೆಣ್ಣು ಧಾರ್ಮಿಕವಾಗಿ ಗಂಡನ ನೆರಳಾಗಿರಬೇಕೆಂಬ ಭಾವನೆಯಿತ್ತು. ಅದನ್ನು ವಚನಕಾರರು ಅಲ್ಲಗಳೆದರು, ಆಕೆಯು ಅವಶ್ಯಕವಾದರೆ ಸ್ವತಂತ್ರ ಮಾರ್ಗಾವಲಂಬಿಯಾಗಬಹುದೆಂದು ಸಾರಿದರು. "ಸತಿಪುರುಷರಿಗೆಲ್ಲಕ್ಕು ಬೇರೊಂದು ಒಡಲುಳ್ಳನ್ನಕ್ಕ, ವ್ರತದ ಕ್ರೀಭಾವ ಬೇರಾದಲ್ಲಿ ಬೇರೆ ಒಬ್ಬ ಒಡೆಯರ ಕಟ್ಟಣೆ ಬೇಕು" ಎಂಬ ಏಲೇಶ್ವರ ಕೇತಯ್ಯನೆಂಬ ವಚನಕಾರನ ಮಾತಿನಲ್ಲಿ ಸ್ತ್ರೀಯು ಧಾರ್ಮಿಕವಾಗಿ ಸ್ವತಂತ್ರ ಸಾಧನೆಯಲ್ಲಿ ತೊಡಗಬಹುದೆಂಬ ಭಾವನೆಯು ಅಡಗಿರುವಂತಿದೆ. ಅಕ್ಕಮಹಾದೇವಿಯಂತಹ ಹೆಣ್ಣೊಬ್ಬಳು ಪ್ರಬಲನಾಗಿದ್ದ ಭವಿಯೊಬ್ಬನನ್ನು ಪ್ರತಿಭಟಿಸಿ ಅವನನ್ನು ತೊರೆದುಬರಲು ಆಕೆಯಲ್ಲಿದ್ದ ನೈತಿಕ ಸ್ಥೈರ್ಯ ಧಾರ್ಮಿಕ ನಂಬಿಕೆಗಳನ್ನು ವೀರಶೈವವು ಬೋಧಿಸಿದ ಸ್ತ್ರೀ-ಪುರುಷ ಸಮಾನತೆಯು ನೀಡಿತೆಂದು ಧಾರಾಳವಾಗಿ ಹೇಳಬಹುದು.

ದೇವರು-ಮೋಕ್ಷ-ಆಧ್ಯಾತ್ಮಿಕ ಸಾಧನೆಗಳೆಲ್ಲವೂ ಶ್ರೇಷ್ಠರಾದ ವ್ಯಕ್ತಿಗಳಿಗೆ ಮಾತ್ರ ಮೀಸಲೇ ಹೊರತು ಸಾಮಾನ್ಯರಿಗಲ್ಲವೆಂಬ ಭಾವನೆಯಿದ್ದು, ಜನಸಾಮಾನ್ಯರು ಈ ಕಲ್ಪನೆಗಳ ಬಗ್ಗೆ ಭಯ-ಭಕ್ತಿಗಳಿಂದಿದ್ದರೇ ಹೊರತು ಆ ಮಾರ್ಗಗಳು ತಮ್ಮನ್ನೂ ಒಳಿತಾದ ಗುರಿಯೆಡೆಗೆ ಒಯ್ಯುವಂತಹವೆಂಬ ನಂಬಿಕೆಯಿರಲಿಲ್ಲ, ಜನರಿಗೆ ಇವೆಲ್ಲ ಗಗನಕುಸುಮಗಳಾಗಿದ್ದುವು. ಇದಕ್ಕೆ ಕಾರಣ ಆಗಿನ ಧರ್ಮಗಳು ವಿಧಿಸಿದ್ದ ತುಂಬ ಕಠಿಣವಾದ ಆಚರಣೆಗಳು, ಸಂಸಾರವಿರಕ್ತಿ, ಐಹಿಕಪರಾಙ್ಮುಖತೆ ಮುಂತಾದವು. ವಚನಕಾರರು ಬೋಧಿಸಿದ ವೀರಶೈವವು ಆ

ಕಾಲದಲ್ಲಿ ಅದ್ಭುತ ಯಶಸ್ಸುಗಳಿಸಿ ಪ್ರಸಾರಗೊಂಡು ಇತರ ಧರ್ಮಗಳಿಂದ ತನ್ನ ವಲಯಕ್ಕೆ ಜನರನ್ನು ಆಕರ್ಷಿಸಿದ್ದಕ್ಕೆ ಕಾರಣ ಶರಣರು ವಿರಕ್ತಿಮಾರ್ಗವನ್ನು ವಿಧಿಸದೆ ಸಂಸಾರ ದಲ್ಲಿದ್ದೂ ಭಕ್ತಿಸಾಧನೆಯನ್ನು ಮಾಡಬೇಕೆಂದು ಬೋಧಿಸಿದುದೇ ಆಗಿದೆ. ಹೆಣ್ಣು-ಹೊನ್ನು-ಮಣ್ಣುಗಳು ತಾವೇ ಕೀಳಲ್ಲ, ಅವುಗಳನ್ನು ಹೊಂದಿ ಅನುಭವಿಸುತ್ತಿದ್ದರೂ ಅವುಗಳ ಬಗ್ಗೆ ಗೀಳು ಹಿಡಿಯದ ರೀತಿಯಲ್ಲಿ ಉತ್ತಮವಾಗಿ ಬಾಳಲು ಸಾಧ್ಯ ವೆಂಬುದು ಶರಣರ ನಿಲುವು. ಹೆಣ್ಣು ಹೊನ್ನು ಮಣ್ಣುಗಳು ಮಾಯೆಯಲ್ಲ, ಮನಸ್ಸಿನಲ್ಲಿ ಕಾಡುವ ಆಸೆಯೇ ಮಾಯೆ ಎಂಬ ಅಲ್ಲಮನ ಮಾತಿನಲ್ಲಿ ಶರಣರ ಧೋರಣೆಯೇ ಅಡಗಿದೆ. ಯಾವ ಸುಖವೂ ತ್ಯಾಜ್ಯವಲ್ಲ, ಆದರೆ ಮನಸ್ಸನ್ನು ಶಿಸ್ತಿಗೊಳ ಪಡಿಸಿದರೆ ಅವು ಯಾವುವೂ ವ್ಯಕ್ತಿಯನ್ನು ಕಾಡಲಾರದು. ಅದಿಲ್ಲದೆ ಅಸಲಿ ವಿರಕ್ತಿಯುಂಟಾಗದೆ ತೋರಿಕೆಗೆ ಮಾತ್ರ ಎಲ್ಲ ಬಿಟ್ಟೆವೆಂಬ ಡಾಂಭಿಕತನವು ಸಲ್ಲದು; ಅಥವಾ ಏನನ್ನೂ ಬಿಡ ಲಾಗದೆ ಮಾನಸಿಕವಾಗಿ ಅಂಟಿಕೊಂಡಿದ್ದರೂ ಯಾವುದೋ ಬಲ ವಂತಕ್ಕೊಳಗಾಗಿ ಸುಖತ್ಯಾಗ ಮಾಡಿದರೆ ಅಂತಹವನು ಇಹ-ಪರಗಳೆರಡರಿಂದಲೂ ವಂಚಿತನಾಗಿ ಅಂತಹವನ ಬಾಳು ಶೋಚ ನೀಯವಾಗುತ್ತದೆ. "ಆರುವನೊಲ್ಲೆನೆಂದು ಅರಣ್ಯಕ್ಕೆ ಹೋಹುದು ಕಾರ್ಯವಲ್ಲ, ದುರುಳತನ. ಊರೊಳಗಿರ್ದರೆ ನರರ ಹಂಗು, ಅರಣ್ಯದೊಳಗಿರ್ದರೆ ತರುಗಳ ಹಂಗು" ಎಂಬ ಸಕಲೇಶ ಮಾದರಸನ ಮಾತುಗಳು ಈ ಮಾನಸಿಕ ಶಿಸ್ತಿನ ಆವಶ್ಯಕತೆಯನ್ನೇ ಸೂಚಿಸುತ್ತವೆ. ಹಲಗೆಯಾರ್ಯನ 'ಶೂನ್ಯ ಸಂಪಾದನೆ'ಯಲ್ಲಿ ಒಂದು ಪ್ರಸಂಗವಿದೆ: ವೈರಾಗ್ಯ ಪರಾಯಣೆ ಯಾಗಿ ದಿಗಂಬರತ್ವದಿಂದ ಬಂದ ಮಹಾದೇವಿಯಕ್ಕನ

ವೈರಾಗ್ಯವನ್ನು ಪರೀಕ್ಷಿಸಲು ಅಲ್ಲಮನು ಕಿನ್ನರ ಬೊಮ್ಮಣ್ಣನನ್ನು ಕಳುಹಿಸುತ್ತಾನೆ. ಹಾಗೆ ಹೊರಟು ಬಂದ ಬೊಮ್ಮಣ್ಣನು ಅಕ್ಕನ ಲಾವಣ್ಯವನ್ನು ಕಂಡು ತನ್ನಲ್ಲಿಯೇ ಈ ರೀತಿ ಆಲೋಚಿಸುತ್ತಾನಂತೆ "ಈಕೆ ಲಿಂಗಾನುಭಾವ ಸಂಪನ್ನೆಯಾದರೆ ಗುರು ತಾಯೆಂದು ಶರಣೆಂಬೆನು. ಅಲ್ಲ ದೇಹಲಜ್ಜಾಭಿಮಾನ ಉಳ್ಳಡೆ ಸ್ತ್ರೀಯಾಗಿ ಕೈವಿಡಿವೆನು," ಎಂದು. ಪ್ರಾಯಶಃ ಈ ಪ್ರಸಂಗವನ್ನು ಹೆಣ್ಣಿನ ಬಗ್ಗೆ ಶರಣರ ನಿಲುಮೆಯ ಸಂಕೇತವೆಂದು ಭಾವಿಸಬಹುದೇನೋ. ಈ ಭಾವನೆಯನ್ನೇ ಸಿದ್ಧರಾಮನು "ಭಕ್ತನ ಮನ ಹೆಣ್ಣಿನೊಳಗಾದಡೆ, ವಿವಾಹವಾಗಿ ಕೂಡುವುದು. ಭಕ್ತನ ಮನ ಮಣ್ಣಿನೊಳಗಾದಡೆ, ಕೊಂಡು ಆಲಯವ ಮಾಡುವುದು. ಭಕ್ತನ ಮನ ಹೊನ್ನಿನೊಳಗಾದಡೆ, ಬಳಲಿ ದೊರಕಿಸುವುದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ" ಎಂದು ವಾಚ್ಯವಾಗಿಯೇ ಹೇಳುತ್ತಾನೆ. ಆದರೆ ಎಂತಹ ಸಂದರ್ಭದಲ್ಲಿಯೂ ಲೌಕಿಕತೆಯು ಪರಮಾರ್ಥಿಕ ಮಹತ್ವಾಕಾಂಕ್ಷೆಯನ್ನು ಮಸುಕುಗೊಳಿಸಬಾರದು ಎಂದು ಮಾತ್ರ ಶರಣರು ಎಚ್ಚರಿಸಿದರು.

ಈ ಮೇಲೆ ಉಕ್ತವಾದ ಸಿದ್ಧರಾಮನ ವಚನದಕೊನೆಯ ಸಾಲು ಶರಣರು ಹಣ ಸಂಪಾದನೆಯ ಬಗ್ಗೆ ತಳೆದಿದ್ದ ಧೋರಣೆಯನ್ನು ಸೂಚಿಸುತ್ತದೆ. ಭಕ್ತನಿಗೆ ಹಣವನ್ನು ಗಳಿಸಬೇಕೆನಿಸಿದರೆ ಅದನ್ನಾತ "ಬಳಲಿ ದೊರಕಿಸುವುದು". ಅತ್ಯಾಶೆಯಿಲ್ಲದೆ ಧರ್ಮಾವಿರುದ್ಧವಾಗಿ ಸ್ವಂತಶ್ರಮದಿಂದ ಗಳಿಸಿ ದಾನ ಧರ್ಮಾದಿಗಳನ್ನು ಮಾಡಿ ಬಾಳುವ ಬಗೆಯನ್ನೇ ಶರಣರು ಬೋಧಿಸಿದುದು. ವೀರಶೈವರು ಅನುಸರಿಸಬೇಕಾದ ಸಾಮಾಜಿಕ ನಡವಳಿಕೆಗಳನ್ನು ಶರಣರು "ಪಂಚಾಚಾರ"ಗಳೆಂದು ಪ್ರಸಿದ್ಧ

ವಾಗಿರುವ ಐಮುಖವಾದ ನೀತಿಸಂಹಿತೆಯಲ್ಲಿ ಅಡಕಗೊಳಿಸಿದರು. ಈ ಪಂಚಾಚಾರಗಳೆಂದರೆ ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರಗಳು. ಇವುಗಳಲ್ಲಿ 'ಸದಾಚಾರ'ವೆಂಬುದು ಹಣವನ್ನು ಗಳಿಸುವ ಬಗ್ಗೆ ಹಾಗೂ ಗಳಿಸಿದುದನ್ನು ಸದ್ವ್ಯಯ ಮಾಡುವ ರೀತಿಗಳನ್ನು ಒಳಗೊಳ್ಳುತ್ತದೆ. "ಸಜ್ಜನ ಕಾಯಕದಲ್ಲಿ ತಂದು ಗುರುಲಿಂಗಜಂಗಮಕ್ಕೆ ನೀಡಿ, ಸತ್ಯ ಶುದ್ಧನಾಗಿಹುದೆ ಸದಾಚಾರ" ವೆಂದು ಚನ್ನಬಸವಣ್ಣನು ಈ ಆಚಾರವನ್ನು ಸೂತ್ರೀಕರಿಸಿ ವಿವರಿಸುತ್ತಾನೆ. ಈ ಆಚಾರದಲ್ಲಿ ಅಂತರ್ಗತವಾದ 'ಕಾಯಕ'ವು ಶರಣರು ನೀಡಿದ ಒಂದು ಶ್ರೇಷ್ಠ ಸೈದ್ಧಾಂತಿಕ ಕೊಡುಗೆ ; ಇದು ಸಿದ್ಧಾಂತವಾಗಿಯೇ ಉಳಿಯದೆ, ಆಚರಣೆಯಲ್ಲಿ ತರಬಲ್ಲಂತಹ ವಾಸ್ತವನೆಲೆಯ ಆದರ್ಶವೂ ಆಗಿದೆ, ಅದಕ್ಕೆ ಆ ಕಾಲದ ಶರಣರೇ ನಿದರ್ಶನ.

# ಕಾಯಕ ತತ್ವ

ಕಾಯಕ ತತ್ವದ ಮೂಲಕ ಶಿವಶರಣರು ಆ ಕಾಲದ ಆರ್ಥಿಕ ಜೀವನಕ್ಕೊಂದು ಹೊಸ ತಿರುವನ್ನಿತ್ತರು. ಸಾಮಾಜಿಕವಾಗಿ ಮೇಲು-ಕೀಳು ಮನೋಭಾವಕ್ಕೆ ಜಾತಿ ವ್ಯವಸ್ಥೆಯು ಕಾರಣವಾಗಿದ್ದಂತೆಯೇ, ಜಾತಿಗಳಿಗೆ ಅಂಟಿದ್ದ ವೃತ್ತಿಗಳಿಗೂ ಈ ತರತಮ ಭಾವನೆಯು ಅನ್ವಯಗೊಂಡಿತು. ಎಲ್ಲ ಬಗೆಯ ಅಸಮಾನತೆಗಳನ್ನೂ ನಿರ್ಮೂಲಗೊಳಿಸಿ 'ವೀರಶೈವ' ಜನಾಂಗವು ಒಂದು ಸಮಗ್ರವೂ, ಸ್ವತಂತ್ರವೂ, ಜೇನುಹುಟ್ಟಿನಂತೆ ಸುವ್ಯವಸ್ಥಿತವೂ ಆದ ಸಮಾಜವಾಗಬೇಕೆಂದು ಹಂಬಲಿಸುತ್ತಿದ್ದ ಶರಣರು ಕಾಯಕ ತತ್ವದ ಮೂಲಕ ಶ್ರಮ ದುಡಿಮೆಗೇ ಗೌರವ ಪ್ರಾಪ್ತವಾಗಬೇಕೆಂದು ಜನ ಮನೋಭಾವನೆಯನ್ನು ಮಾರ್ಪಡಿಸಲು ಪ್ರಯತ್ನಿಸಿದರು. ಇದೊಂದು ಬರಿಯ ಆರ್ಥಿಕ ಸಿದ್ಧಾಂತವಾಗಿದ್ದರೆ ಅದು ಜನರ ಮನಸ್ಸನ್ನು ಅಷ್ಟು ಆಳವಾಗಿ ಹೊಗುತ್ತಿರಲಿಲ್ಲವೇನೋ, ಅದು ಶರಣರ ಉದ್ದೇಶಕ್ಕೆ ಭಂಗ ತರುವಂತಹುದೂ ಆಗುತ್ತಿತ್ತು. ಏಕೆಂದರೆ, ಬರಿಯ ಆರ್ಥಿಕ ತತ್ವವು ಕೇವಲ ಲೌಕಿಕಾಭಿವೃದ್ಧಿಯನ್ನು ಗುರಿಯಾಗಿ ಪಡೆದಿರಬೇಕಾದುದು ಅನಿವಾರ್ಯ. ಆದರೆ ಆರ್ಥಿಕತತ್ವಕ್ಕೆ ಧಾರ್ಮಿಕ-ಆಧ್ಯಾತ್ಮಿಕ ಹಿನ್ನಲೆಯನ್ನೊದಗಿಸುವುದರ ಮೂಲಕ ಕಾಯಕವು ಹೆಚ್ಚು ದೃಢವಾದ ಕಲ್ಪನೆಯಾಗುವಂತೆ ಮಾಡಿದರು. ಆಧ್ಯಾತ್ಮಿಕತೆಯ ಹಿನ್ನೆಲೆಯಲ್ಲಿ ಮಾತ್ರ ಕಾಯಕವು ಹೆಚ್ಚು ಅರ್ಥವಂತಿಕೆ

ಯನ್ನು ಪಡೆಯುವುದು. ಎಲ್ಲ ವಿಷಯಗಳಲ್ಲಿಯೂ ಧಾರ್ಮಿಕತೆ ಯನ್ನಾರೋಪಿಸುವ, ದೈವ ನಿಯಮವನ್ನು ಕಾಣುವ ಭಾರತೀಯ ಜನಸಾಮಾನ್ಯ ಚೇತನ–ಬುದ್ಧಿಗಳಿಗೆ, ಶ್ರಮ ದುಡಿಮೆಗೆ ಧಾರ್ಮಿಕತೆಯ ಅನುಲೇಪನ ಮಾಡಿದಾಗಲೇ ಅದು ಉಪಾದೇಯವಾಗುತ್ತದೆಂದವರು ಬಲ್ಲರು. ಈ ರೀತಿ ಸಾಮಾ ನ್ಯರ ಹೃದಯದ ಮಿಡಿತವನ್ನು ಬಲ್ಲ ಶರಣರು ಈ ರೀತಿ ಮಾಡಿ ದಾಗ ಸಾಮಾನ್ಯನೂ ಪ್ರಾಮಾಣಿಕನಾಗಿಯೂ ಋಜುಮಾರ್ಗ ದಿಂದಲೂ ತನ್ನ ವೃತ್ತಿಯನ್ನು ನಡೆಸುವುದಲ್ಲದೆ ಅದು ಆ ಅವನ ಆತ್ಮೋನ್ನತಿಗೂ ಕಾರಣವಾಗುವುದೆಂದು ಅರಿತಿದ್ದರು.

'ಕಾಯಕ' ಶಬ್ದವು 'ದೇಹಕ್ಕೆ ಸಂಬಂಧಪಟ್ಟ' ಎಂಬ ವಿಶೇಷಣಾರ್ಥದಲ್ಲಿ ಮಾತ್ರ ವಚನಕಾರರ ಕಾಲದವರೆಗೂ ಬಳಕೆ ಯಲ್ಲಿತ್ತು. ಆದರೆ ಶರಣರು ಈ ಶಬ್ದದಲ್ಲಿಯೇ ತಾವು ಕಂತ ವಿಶಿಷ್ಟ ತತ್ವವೊಂದನ್ನು ಇಡಿಕಿರಿಸಿ ಅದೊಂದು ವ್ಯಾಪಕವೂ ಪಾರಿಭಾಷಿಕಪೂ ಆದ ಶಬ್ದವಾಗುವಂತೆ ಮಾಡಿದರು. ಐಹಿಕ ಜೀವನವು ತ್ಯಾಜ್ಯವೆಂದು ಎಂದೂ ಹೇಳದ ವಚನಕಾರರು, ಅದರ ಶುಚಿತ್ವಕ್ಕೆ ಮಹತ್ವವನ್ನಿತ್ತು ಕಾಯಕ ತತ್ವದ ಮೂಲಕ ವಾಗಿ 'ಇಲ್ಲಿ ಸಲ್ಲುವ' ಬಗೆಯನ್ನು ತಿಳಿಸಿ, ಇದರಿಂದಾಗಿ 'ಅಲ್ಲಿಯೂ ಸಲ್ಲುವ' ಮಾರ್ಗವನ್ನು ಕಾಣಬಹುದೆಂದು ಸಾರಿ ದರು. ಪರೋಪಜೀವಿಗಳಾಗಿಯಾಗಲೀ ಪರಪೀಡನೆಯಿಂದ ಲಾಗಲೀ ಹೊಟ್ಟೆಯನ್ನು ಹೊರೆಯುತ್ತ ಜೀವಿಸುವುದು ಪ್ರಾಣಿ ಜೀವನಕ್ಕಿಂತ ಕೀಳಾದದ್ದು ; ಅನ್ಯಾಯವೃತ್ತಿಯಿಂದ ಗಳಿಸಿದ ಹಣವನ್ನು ಗುರುಲಿಂಗಜಂಗಮಗಳಿಗೆ ಯಥೇಷ್ಟವಾಗಿ ವ್ಯಯ ಮಾಡಿ ದಾಸೋಹವನ್ನು ಮಾಡಿದರೂ ಅದರಿಂದ ಯಾವ ಉಪ ಯೋಗವೂ ಇಲ್ಲ. ಚೆನ್ನಬಸವಣ್ಣನ ಈ ವಚನವನ್ನು ನೋಡಿ :

"ತನುಮನ ಬಳಲದೆ ಉದ್ದಂಡವೃತ್ತಿಯಲ್ಲಿ ಧನವ ಗಳಿಸಿ
ಗುರುಲಿಂಗಜಂಗಮಕ್ಕೆ ವೆಚ್ಚಿಸಿ ದಾಸೋಹವ ಮಾಡಿ
ಭಕ್ತನಾದೆನೆಂಬುವನ ತೋಱದಿರಯ್ಯ,
ಅದೇಕೆಂದಡೆ: ಅವ ಪರಧನಚೋರಕ,
ಅವ ಪಾಪಿ, ಕೋಪಿ, ಪರಭ್ರಷ್ಟ !
ಅವರಿಗೆ ವಿಚಾರಿಸದೆ ಉಪದೇಶವ ಕೊಟ್ಟ ಗುರುವಿಂಗೆ
ರೌರವ ನರಕ!"

ಶ್ರಮದುಡಿಮೆಯಿಂದ ಗಳಿಸದವನಿಗೆ ಉಪದೇಶವನ್ನೀಯುವ ಗುರುವಿಗೂ ನರಕ ಪ್ರಾಪ್ತಿಯುಂಟಾಗುತ್ತದೆಂದು ಹೇಳುವುದರ ಮೂಲಕ ಇಲ್ಲಿ ವಚನಕಾರನು ಅನ್ಯಾಯದ ಗಳಿಕೆಯು ಎಷ್ಟು ಹೇಯವಾದುದೆಂಬುದನ್ನು ಸ್ಪಷ್ಟಪಡಿಸುತ್ತಿದ್ದಾನೆ.

ಅನ್ಯಾಯದಿಂದ ಹಣ ಸಂಪಾದನೆಯನ್ನು ಮಾಡುವುದು ಎಷ್ಟು ಹೇಯವೋ ಸೋಮಾರಿಯಾಗಿ ಬೇಡಿ ಹಣವನ್ನು ತರುವುದೂ ಅಷ್ಟೇ ಹೀನಾಯವಾದುದು. "ಭಕ್ತರ ಭವನಂಗಳ ಹೊಕ್ಕು, ಕಾಯಕ ಸತ್ತು ಹಣ ಹೊನ್ನ ಬೇಡಿಹೆನೆಂಬುದು ಕಷ್ಟವಲ್ಲವೆ ಸದ್ ಭಕ್ತರಿಗೆ?" ಎಂದು ಆಯ್ದಕ್ಕಿ ಮಾರಯ್ಯನು ಪ್ರಶ್ನಿಸುತ್ತಾನೆ. ಅಥವಾ ತನ್ನ ವೃತ್ತಿಯನ್ನು ಹೃತ್ಪೂರ್ವಕ ವಾಗಿಯೂ ನಿಷ್ಠೆಯಿಂದಲೂ ಮಾಡದೆ ಇದ್ದರೆ ಅದು ಕಾಯಕ ವೆನಿಸುವುದಿಲ್ಲ. "ಕಾಯಕವೆಂದು ಕಾಯುವ ಬಳಲಿಸದೆ ತನು ಕರಗದೆ ಮನ ನೋಯದೆ ಕಾಡಿ ಬೇಡಿ ಮಾಡುವುದು ದಾಸೋಹವೆ?" ಎಂದು ಶಿವಲೆಂಕ ಮಂಚಣ್ಣನೆಂಬ ವಚನಕಾರನು ಕೇಳುತ್ತಾನೆ. ದೇಹ ಅಥವಾ ಮನಸ್ಸುಗಳನ್ನು ಬಳಲಿಸದೆ ಇದ್ದರೆ ಯಾವ ಕೆಲಸವೂ ಕಾಯಕವೆನ್ನಿಸಿಕೊಳ್ಳುವುದಿಲ್ಲ. ಆದ್ದರಿಂದ ಜೀವನಧಾರಣೆಗೆ ಆವಶ್ಯಕವಾದ ದ್ರವ್ಯವನ್ನು ಪ್ರತಿಯೊಬ್ಬನೂ

ಸ್ವಂತ ದುಡಿಮೆಯಿಂದ, ಶ್ರಮದಿಂದಲೇ ಸಂಪಾದಿಸಬೇಕೆಂದು ಶರಣರು ಹೇಳಿದರು.

ಕಾಯಕವೆಂದರೆ, ಚೆನ್ನಬಸವಣ್ಣನ ಮಾತಿನಲ್ಲಿ ಸೂತ್ರೀಕರಿಸಿ ಹೇಳಬೇಕೆಂದರೆ, "ತನುಮನ ಬಳಲಿಸಿ ತಂದು ದಾಸೋಹವ" ಮಾಡುವುದು. ಎಂದರೆ ಜೀವನ ನಿರ್ವಹಣೆಗಾಗಿ ದೇಹ ಅಥವಾ ಮನಸ್ಸನ್ನು ಬಳಲಿಸಿ ಹಣವನ್ನು ಸಂಪಾದಿಸಬೇಕು. ಹಾಗೆ ತಾನು ಸಂಪಾದನೆ ಮಾಡಿದುದನ್ನು ತ್ರಿವಿಧ ದಾಸೋಹ ಕ್ಕಾಗಿ ವ್ಯಯಿಸಬೇಕು, ತಾನು ಮಾಡುವ ಕೆಲಸವನ್ನು, ಎಂದರೆ ಜೀವನ ನಿರ್ವಹಣೆಗಾಗಿ ಅನುಸರಿಸುತ್ತಿರುವ ವೃತ್ತಿಯನ್ನು ಶ್ರದ್ಧೆ-ಭಕ್ತಿಗಳಿಂದ ನಿರ್ವಹಿಸಬೇಕು—ಇವು ಕಾಯಕತತ್ವದ ಮುಖ್ಯಾಂಶಗಳು. ತಾನು ಮಾಡುವ ಕೆಲಸವು ಕೇವಲ ಹಣ ಸಂಪಾದನೆಯ ಮಾರ್ಗವೆಂದು ವ್ಯಕ್ತಿಯು ತಿಳಿಯುವುದಾದರೆ, ಐಶ್ವರ್ಯವೇ ಜೀವನದ ಗುರಿಯಾಗಿಬಿಟ್ಟರೆ, ವೃತ್ತಿಗೊಂದು ತಾತ್ವಿಕ ಬುನಾದಿಯಿಲ್ಲದೆ ಅದು ಬರಡಾಗುತ್ತದೆ; ಹೀಗಾದಾಗ ವೃತ್ತಿನಿರ್ವಹಣೆಯಲ್ಲಿ ವ್ಯಕ್ತಿಯು ನೈತಿಕ ಹೊಣೆಗಾರಿಕೆಯನ್ನು ಕಳೆದುಕೊಳ್ಳಬಹುದು. ವೃತ್ತಿಯು ಆಧ್ಯಾತ್ಮಿಕ ಸಾಧನೆಗೆ ಒಂದು ಪ್ರಬಲವಾದ ಮಾರ್ಗವಾಗಬೇಕೆಂಬುದೇ ವಚನಕಾರರ ಆಶಯವಾಗಿತ್ತು. ಶ್ರದ್ಧಾಭಕ್ತಿಗಳಿಂದ ತಾನು ತನ್ನ ವೃತ್ತಿಯಲ್ಲಿ ನಿರತನಾದರೆ ತನ್ನ ಕೆಲಸವೇ ತನಗೆ ಮೋಕ್ಷವನ್ನೀಯುವ ಮಾರ್ಗವಾಗುತ್ತವೆಂಬ ನಂಬಿಕೆಯು ಆಳವಾದರೆ ಆಗ ವೃತ್ತಿ ನಿರತನಾದವನಿಗೆ ಹೊಣೆಗಾರಿಕೆಯು ಹೆಚ್ಚಾಗುತ್ತದೆ, ವೃತ್ತಿಯ ಬಗ್ಗೆ ಪೂಜ್ಯತೆಯುಂಟಾಗುತ್ತದೆ, ಪೂಜ್ಯಭಾವನೆಯಿರುವ ವಸ್ತು ವನ್ನು ಅತ್ಯಂತ ನಿರ್ಮಲವಾಗಿಡಲು ಶ್ರಮಿಸುತ್ತಾನೆ; ಈ ರೀತಿ ವ್ಯಕ್ತಿಯು ಜೀವನದ ಎಲ್ಲ ಹಂತಗಳಲ್ಲೂ, ಎಲ್ಲ ವಿಷಯ

ಗಳಲ್ಲಿಯೂ ನೈರ್ಮಲ್ಯವನ್ನು ಕಾಪಾಡಿಕೊಂಡು ಬಂದರೆ ಅದೇ "ಇಲ್ಲಿ ಸಲ್ಲುವ" ರೀತಿ, ಆಗ "ಇಹವೇ ಅರಳದೆ ಪರವಾಗಿ" ಎಂಬುದು–ವಚನಕಾರರ ನಿಲವು.

ಅತ್ಯಂತ ನಿಷ್ಠೆಯಿಂದ ಕಾರ್ಯನಿರತನಾಗಿದ್ದ ಮಡಿವಾಳ ಮಾಚಯ್ಯನ ಬಗ್ಗೆ ಚನ್ನಬಸವಣ್ಣನು ಆಡಿದ ಗೌರವದ ಮಾತುಗಳು ಶರಣರ ಕಾಣ್ಕೆಯ ಆದರ್ಶ ಕಾಯಕನಿರ್ವಹಣೆ ಯನ್ನು ಅಭಿವ್ಯಕ್ತಿಗೊಳಿಸುತ್ತದೆ: "ಕಾಯ ಕಾಯಕವ ಮಾಡು ತ್ತಿರಲು, ಮನವು ಲಿಂಗದಲ್ಲಿ ಬೆರಸಿ ತೆಱಹಿಲ್ಲದಿಪ್ಪ ಮಡಿವಾಳನ ಪರಿಯ ನೋಡಾ!" ದೇಹವು ವೃತ್ತಿನಿರತನಾಗಿರುವಾಗ ಮನಸ್ಸು ಲಿಂಗದಲ್ಲಿ ಬೆರೆತಿರುತ್ತದೆ ಎಂಬ ಮಾತಿನಲ್ಲಿ ಕಾಯಕದ ಬಗ್ಗ ಇಟ್ಟಿರಬೇಕಾದ ಪೂಜ್ಯಭಾವನೆಯು ಎಂತಹುದಿರಬೇಕೆಂಬುದನ್ನು ಅತ್ಯಂತ ಸಮರ್ಪಕವಾಗಿ ಸೂಚಿಸುತ್ತದೆ. ಇಂತಹ ಕಾಯಕ ನಿರತೆಯೇ ದೈಹಿಕ-ಆಧ್ಯಾತ್ಮಿಕ ಸಾಧನೆಯಾಗುತ್ತದೆ, ಐಹಿಕ-ಆಮುಷ್ಮಿಕಸಾಧನೆಗೆ ಮಾರ್ಗವಾಗುತ್ತದೆ. ಹರಿಹರನು ಚಿತ್ರಿಸುವ ಕುಂಬಾರ ಗುಂಡಯ್ಯನ ಕಾಯಕನಿರ್ವಹಣೆಯು ಈ ಆದರ್ಶವನ್ನು ತುಂಬ ಸುಂದರವಾಗಿ ಸಂಕೇತಿಸುತ್ತದೆ: ಹೊರಗೆ ಮಡಕೆಗೆ ರೂಪುಕೊಡಲು ಕಲ್ಲು ಹಲಗೆಯಿಂದ ಬಡಿಯುತ್ತಿದ್ದರೆ, ಆ ಲಯಕ್ಕನುಗುಣವಾಗಿ ಶಿವನೇ ಕುಣಿಯಲು ತೊಡಗುತ್ತಾನೆ. ಅವನ ದೈಹಿಕ ಚಲನವಲನಗಳಿಂದ ಬಾಹ್ಯದಲ್ಲಿ ಮಡಕೆಯು ತಯಾರಾಗುತ್ತಿದ್ದಂತೆಯೇ ಅವನ ಅಂತರಂಗವು ಆಧ್ಯಾತ್ಮಿಕ ಮಾರ್ಗದಲ್ಲಿ ಸಾಧನಾನಿರತವಾಗಿ ಅವನ ಅನುಭವವು ರೂಪುಗೊಳ್ಳುತ್ತದೆ. ಭಕ್ತನು ಮಾಡುವ ನಿಷ್ಠಾಪೂರಿತ ಕಾಯಕವು ದೇವರನ್ನೂ ತನ್ನ ತಾಳಕ್ಕೆ ತಕ್ಕಂತೆ ಕುಣಿಸುತ್ತ ದೆಂಬುದನ್ನೂ ಈ ಸುಂದರವಾದ ರಗಳೆಯು ಧ್ವನಿಸುತ್ತದೆ.

ಇಂತಹ ಕಾಯಕನಿಷ್ಠನಿಗೆ ಬೇರಾವುದೇ ಪೂಜೆಯ ಮೂಲಕ ದೇವರನ್ನೊಲಿಸುವ ಆವಶ್ಯಕತೆಯಿಲ್ಲ; ಅದರ ಬದಲು ಅವನಿರುವ ಸ್ಥಳವೇ ಪವಿತ್ರಕ್ಷೇತ್ರವಾಗುತ್ತದೆಂದು ಶರಣರು ಹೇಳಿದರು :

"ಅಸಿ ಮಸಿ ಕೃಷಿ ವಾಣಿಜ್ಯ ಮುಂತಾದ ಕಾಯಕವ ಮಾಡಿ,
ಭಕ್ತರ ವಡುಗ ಪಾದತ್ರಾಣ ಪಹರಿ ಬಾಗಿಲು
ಬೊಕ್ಕಸ ಬಿಯಗ ಮುಂತಾದ ಕಾಯಕವಂ ಮಾಡಿಕೊಂಡು,
ವ್ರತಕ್ಕೆ ಊಣೆಯವಿಲ್ಲದೆ, ಮಾಡುವ ಕೃತ್ಯಕ್ಕೆ ಕಡೆಯಾಗದೆ–
ಈ ಭಕ್ತನ ಅಂಗಳ ಅವಿಮುಕ್ತಿಕ್ಷೇತ್ರ.
ಅತನ ಮನೆಯ ಆಚಾರವೆ ಪ್ರಾಣವಾದ ರಾಮೇಶ್ವರ–
ಲಿಂಗದಾಶ್ರಯ".

ಎಂಬ ಅಕ್ಕಮ್ಮನೆಂಬ ವಚನಕಾರ್ತಿಯ ಮಾತಿನಲ್ಲಿ ವಚನಕಾರರು ಕಾಯಕನಿಷ್ಠೆಗೆಎಂತಹಮಹತ್ವವನ್ನಿತ್ತರೆಂಬುದು ತಿಳಿಯುತ್ತದೆ.

ಕಾಯಕವನ್ನಾಶ್ರಯಿಸಲು ಹಿರಿಯ-ಕಿರಿಯ, ಮೇಲು-ಕೀಳು, ಚಿಕ್ಕವನು-ದೊಡ್ಡವನು ಎಂಬ ಭೇದವಿಲ್ಲ. ಎಲ್ಲರೂ ಕಾಯಕವನ್ನನುಸರಿಸಲೇಬೇಕೆಂದು ಶರಣರ ಒತ್ತಾಯ. "ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ, ಸತ್ಯಶುದ್ಧವಿಲ್ಲದುದು ಕಾಯಕ ವಲ್ಲ" ಎಂದು ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀಯಾದ ಕಾಳವ್ವೆಯು ಹೇಳುತ್ತಾಳೆ. ಈ ಮಾತಿನಲ್ಲಿ ಭಕ್ತನು ಕಾಯಕವನ್ನು ಹೊಂದಿರ ಬೇಕಾದ ಅನಿವಾರ್ಯತೆಯನ್ನೂ ಆ ಕಾಯಕವು ಸತ್ಯಶುದ್ಧ ವಾಗಿರಬೇಕಾದುದನ್ನೂ ತುಂಬ ಸುಂದರವಾಗಿ ಹೇಳಲಾಗಿದೆ. ಎಲ್ಲರಿಂದ ಪೂಜೆಗೊಳ್ಳುವ ಅರ್ಹತೆಯನ್ನು ಪಡೆದವನೂ ಸಹ ಕಾಯಕನಿರತನಾದರೆ ಮಾತ್ರ ಅವನು ನಿಜವಾಗಿ ಪೂಜ್ಯನಾಗು ವುದು, ಆಗ ಮಾತ್ರ ಅವನಿಗೆ ಸದ್ಗತಿಯುಂಟಾಗುವುದು;

ಆದ್ದರಿಂದ ಯಾರೂ ಸಹ ತನಗೆ ಕಾಯಕದ ಆವಶ್ಯಕತೆಯಿಲ್ಲ ವೆಂದು ಹೇಳುವಂತಿಲ್ಲ: "ಗುರುವಾದರೂ ಕಾಯಕದಿಂದವೇ ಜೀವನ್ಮುಕ್ತಿ; ಲಿಂಗವಾದರೂ ಕಾಯಕದಿಂದವೇ ಶಿಲೆಯ ಕುರುಹು ಹರಿವುದು; ಜಂಗಮವಾದರೂ ಕಾಯಕದಿಂದವೇ ವೇಷದ ಪಾಶ ಹರಿವುದು" ಎನ್ನುತ್ತಾನೆ ನುಲಿಯ ಚಂದಯ್ಯ. ಗುರು-ಜಂಗಮರ ವಿಷಯವಿರಲಿ, ಲಿಂಗವೇ ಅಂಗರೂಪವನ್ನು ಧರಿಸಿ ಬಂದರೂ ಕಾಯಕವನ್ನವಲಂಬಿಸಿದಾಗಲೇ ಅದಕ್ಕೆ ಪೂಜ್ಯತೆಯುಂಟಾಗುವುದೆಂಬಷ್ಟರ ಮಟ್ಟಿಗೆ ಶ್ರಮದುಡಿಮೆಯ ಅನಿವಾರ್ಯತೆಯನ್ನು ಶರಣರು ಒತ್ತಿ ನುಡಿಯುತ್ತಾರೆ. ಕಾಯಕ ದಲ್ಲಿ ತೊಡಗಿರುವುದೇ ಶ್ರೇಷ್ಠವಾದ ಪೂಜೆ, ಎಂದರೆ ಕಾಯಕ ದಲ್ಲಿ ನಿರತನಾದವನು ತದೇಕನಾಗಿ ಕೆಲಸಮಾಡಬೇಕು. ಯಾವ ಕಾರಣದಿಂದಲೂ ಕಾಯಕವನ್ನು ನಿಲ್ಲಿಸಿ ಕಡೆಗಣಿಸತಕ್ಕದ್ದಲ್ಲ. "ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದರೂ ಮರೆಯ ಬೇಕು, ಲಿಂಗಪೂಜೆಯಾದರೂ ಮರೆಯಬೇಕು" ಎಂದು ಹೇಳುವ ಆಯ್ದಕ್ಕಿ ಮಾರಯ್ಯನು ಅದರ ಶ್ರೇಷ್ಠತೆಯನ್ನು "ಕಾಯಕವೇ ಕೈಲಾಸ"ವೆಂಬುದಾಗಿ ಸೂತ್ರೀಕರಿಸಿ ಹೇಳುತ್ತಾನೆ. ತಾನು ಮಾಡುವ ಕೆಲಸವು ಅನಿವಾರ್ಯವಾದುದರಿಂದ ಮಾತ್ರವೇ ಅದನ್ನು ಮಾಡುತ್ತಿದ್ದೇನೆಂದೂ, ಆದ್ದರಿಂದ ಕಾಯಕವೊಂದು ನಿರ್ಬಂಧವೆಂದೂ ಭಾವಿಸುವುದು ನಿಜವಾದ ಕಾಯಕನಿಷ್ಠನ ಮನೋಭಾವನೆಯಾಗದು. ಕೆಲಸದಲ್ಲಿ ತೊಡಗಿ ರುವ ಕಾಲವು ತನ್ನ ಜೀವಿತದ ಅತ್ಯಂತ ಆನಂದದಾಯಕ ಕಾಲವೆಂದೂ, ಅದರಿಂದಲೇ ತನ್ನ ಜೀವನಕ್ಕೆ ಅರ್ಥವಂತಿಕೆ ಯೊದಗುವುದೆಂದೂ ಭಾವಿಸುವುದೇ ಕಾಯಕತತ್ವದ ಆದರ್ಶ ಮನೋಭಾವ.

ನಿಷ್ಠಾವಂತನಾಗಿ ಕಾಯಕದಲ್ಲಿ ತೊಡಗಿರುವವನಿಗೆ ಒದ
ಗುವ ಶಕ್ತಿಯು ಅದ್ಭುತವಾದುದು, ಲಿಂಗಕ್ಕೆ ಕೂಡ ಆಜ್ಞಾ
ಪಿಸುವ ಸಾಮರ್ಥ್ಯವು ಇದರಿಂದ ಪ್ರಾಪ್ತವಾಗುತ್ತದೆಂಬುದು
ಶರಣರ ನಂಬಿಕೆ; 'ಇದನ್ನು ಸೂಚಿಸಲು ನುಲಿಯ ಚಂದಯ್ಯ
ನೆಂಬೊಬ್ಬ ವಚನಕಾರನ ಪ್ರಸಂಗವು 'ಶೂನ್ಯಸಂಪಾದನೆ' ಯಲ್ಲಿ
ಚಿತ್ರಿತವಾಗಿರುವುದನ್ನಿಲ್ಲಿ ನೋಡಬಹುದು : ನುಲಿಯ ಚಂದ
ಯ್ಯನು, ಅವನ ಹೆಸರಿನ ಹಿಂದಿರುವ ವಿಶೇಷಣವೇ ಸೂಚಿಸು
ವಂತೆ, ಹಗ್ಗವನ್ನು ಹೊಸೆದು ಅದನ್ನು ಮಾರಿ ಜೀವಿಸುತ್ತಿದ್ದ
ಕಾಯಕದವನು, ಜಂಗಮ ಸೇವೆಯೇ ಲಿಂಗಪೂಜೆಯೆಂದು
ನಂಬಿಕೆಯಿಟ್ಟಿದ್ದವನು. ಒಮ್ಮೆ ಇವನ ಕಾಯಕನಿಷ್ಠೆಯನ್ನು
ಪರೀಕ್ಷಿಸಲು ಅವನ ಇಷ್ಟಲಿಂಗವು ನೀರಿನಲ್ಲಿ ಬಿದ್ದುಹೋಗು
ತ್ತದೆ, ಆದರೆ ಕಾಯಕನಿರತನಾದ ಚಂದಯ್ಯನು ಅದನ್ನು
ಗಮನಿಸುವುದೇ ಇಲ್ಲ, ತನ್ನ ಪಾಡಿಗೆ ತಾನು ಜಂಗಮದಾಸೋಹ
ಕ್ಕಾಗಿ ಮುನ್ನಡೆಯುತ್ತಾನೆ. ಆಗ ಆ ಲಿಂಗವು ವಿಧಿಯಿಲ್ಲದೆ
ಪುರುಷಾಕಾರವನ್ನು ತಾಳಿ ತನ್ನನ್ನು ಮರಳಿ ಸ್ವೀಕರಿಸಬೇಕೆಂದು
ಚಂದಯ್ಯನನ್ನು ಬೇಡಿಕೊಳ್ಳುತ್ತದೆ ; ಮೊದಲು ತನ್ನಿಂದ
ದೂರವಾಗಿ ಈಗ ಪುನಃ ತನ್ನಲ್ಲಿಗೆ ಬರಲು ಹಾತೊರೆಯುವ
ಲಿಂಗವನ್ನು ಅವನು ಸ್ವೀಕರಿಸಲು ನಿರಾಕರಿಸುತ್ತಾನೆ. ಆದರೂ
ಅಷ್ಟಕ್ಕೇ ಅವನನ್ನು ಬಿಡದೆ ಲಿಂಗವು ಒತ್ತಾಯಪಡಿಸಿದಾಗ,
ಕಾಯಕನಿಷ್ಠನಾದ ಮಡಿವಾಳ ಮಾಚಯ್ಯನ ಬಳಿಗೆ ಹೋಗಿ
ಇನ್ನು ಮುಂದೆ ತಾನು ಒಡೆಯರ ಸೇವೆಯನ್ನು ಬಿಡದೆ
ಮಾಡಿಕೊಂಡಿರುತ್ತೇನೆಂದು ಅವನಿಗೆ ಮಾತುಕೊಟ್ಟು ಬಂದರೆ
ಮಾತ್ರ ತಾನು ಪುನಃ ಅದನ್ನು ಸ್ವೀಕರಿಸುವೆನೆಂದು ನುಡಿದಾಗ
ಲಿಂಗವು ಹಾಗೆಯೇ ಮಾಡುತ್ತದೆ. ಈ ರೀತಿ ಮಡಿವಾಳಯ್ಯನು

ಲಿಂಗಕ್ಕೆ ಹೊಣೆಯಾಗಿ ನಿಂತಮೇಲೆ, ಅದೂ ತನ್ನಂತೆಯೇ ಹಗ್ಗವನ್ನು ಹೊಸೆಯುವ ಕಾಯಕದಲ್ಲಿ ನಿರತವಾಗುವುದಾದರೆ ಮಾತ್ರ ತಾನು ಸ್ವೀಕರಿಸುವೆನೆಂದು ಹೇಳಿ ಅದನ್ನೂ ಕಾಯಕದಲ್ಲಿ ತೊಡಗಿಸುತ್ತಾನೆ. ಈ ಕತೆಯು ನಿಷ್ಠೆಯಿಂದ ತನ್ನ ಕರ್ತವ್ಯವನ್ನು ನಿರ್ವಹಿಸುವವನಿಗೆ ಬರುವ ಮಾನಸಿಕ ಸ್ಥೈರ್ಯವನ್ನು ಸಂಕೇತಿಸುತ್ತದೆ. ಪ್ರಾಮಾಣಿಕವಾಗಿಯೂ ಸತ್ಯನಿಷ್ಠೆಯಿಂದಲೂ ದುಡಿಯುವವನಿಗೆ ಯಾರ ಹಂಗೂ ಇಲ್ಲ, ಯಾರನ್ನು ಬೇಕಾದರೂ ಎದುರಿಸುವ ನೈಸರ್ಗಿಕ ಬಲವು ಪ್ರಾಪ್ತವಾಗುತ್ತದೆ; ತನ್ನ ಕರ್ತವ್ಯವನ್ನು ಮಾಡಿ ಮುಗಿಸುವುದರಿಂದ ಒಂದು ಬಗೆಯ ಧನ್ಯತಾಭಾವ, ಮನಶ್ಶಾಂತಿಗಳು ಲಭ್ಯವಾಗುವುದಲ್ಲದೆ ಅಪಮಾರ್ಗವನ್ನು ಕಂಡಾಗ ಅದನ್ನು ಪ್ರತಿಭಟಿಸುವ ಶಕ್ತಿಯುಂಟಾಗುತ್ತದೆ—ಇದೇ ಕತೆಯಲ್ಲಿ ಸೂಚ್ಯವಾಗಿರುವ ಕಾಯಕಮಹತ್ವ.

ಕಾಯಕವು ಈ ರೀತಿ ಆತ್ಮಪ್ರೀತಿಯಿಂದ ಋಜುಮಾರ್ಗದಿಂದ ಹಣಸಂಪಾದನೆ ಮಾಡುವುದನ್ನು ಬೋಧಿಸುವುದರಿಂದ ಕೆಲಸಕ್ಕೆ ಪ್ರತಿಫಲವನ್ನು ಮಾತ್ರ ನಿರೀಕ್ಷಿಸಬೇಕೇ ಹೊರತು ತನ್ನ ಕೆಲಸದ ಯೋಗ್ಯತೆಗಿಂತ ಮಿಗಿಲಾದುದನ್ನು ಸ್ವೀಕರಿಸಬಾರದೆಂದು ಶರಣರು ವಿಧಿಸಿದರು. "ಹಾಗದ ಕಾಯಕವ ಮಾಡಿಕೊಂಡು ಹಣವಡ್ಡ ತಾ ಎಂಬಲ್ಲಿ ಸತ್ಯ ಕಾಯಕವುಂಟೋ?" ಎಂದು ಆಯ್ದಕ್ಕಿ ಮಾರಯ್ಯನು ಪ್ರಶ್ನಿಸುತ್ತಾನೆ. ಹಾಗಾಗಿ ಸತ್ಯಕಾಯಕದಲ್ಲಿ ಮೋಸಕ್ಕೆ ಅವಕಾಶವಿಲ್ಲ, ಚೌಕಾಸಿಗೂ ಅವಕಾಶವಿಲ್ಲ. ಮೇಲೆ ಹೇಳಿದ ನುಲಿಯ ಚಂದಯ್ಯನ ಪ್ರಸಂಗದ ಮುಂದಿನ ಭಾಗದಲ್ಲಿ ಈ ಅಂಶವೂ ಸೂಚಿತವಾಗಿದೆ : ಲಿಂಗವನ್ನು ಕಾಯಕಕ್ಕೆ ತೊಡಗಿಸಿದ

ಚಂದಯ್ಯನು ತಾನು ಮಾಡಿದ ಹಗ್ಗವನ್ನು ಮಾರಿ ಹಣವನ್ನು ತಾರೆಂದು ಲಿಂಗಕ್ಕೆ ಆಜ್ಞಾಪಿಸುತ್ತಾನೆ. ಈ ವಿಷಯವನ್ನು ತನ್ನ ದಿವ್ಯಜ್ಞಾನದಿಂದ ಅರಿತ ಬಸವಣ್ಣನು ಆ ಹಗ್ಗವನ್ನು ಒಂದು ಸಾವಿರ ಹೊನ್ನಿಗೆ ಕೊಂಡುಕೊಳ್ಳುತ್ತಾನೆ. ಇದನ್ನು ತಿಳಿದ ಚನ್ನಯ್ಯನು ಹಗ್ಗವು ಸಾವಿರ ಹೊನ್ನು ಬೆಲೆಬಾಳ ವಂತಹುದಲ್ಲವೆಂದು ಹೇಳಿ, ವಸ್ತುವಿನ ಬೆಲೆಗಿಂತ ಅತ್ಯಧಿ ಹಣವನ್ನು ಸ್ವೀಕರಿಸುದುದಕ್ಕಾಗಿ ಲಿಂಗವನ್ನು ಹೀಯಾಳಿಸ ತ್ತಾನೆ; ತಾನು ತಂದ ಅನ್ಯದ್ರವವನ್ನು ತೆಗೆದುಕೊಂಡ ಎಲ್ಲಿಯಾದರೂ ಹೋಗು, ತನ್ನ ಬಳಿ ಬರಬೇಡವೆಂದು ಅದನ್ನು ಅಟ್ಟುತ್ತಾನೆ. ಆದರೆ ಸಮಜಾಯಿಷಿಗಾಗಿ ಲಿಂಗವು ಚಂದಯ್ ನೊಡನೆ ಮಡಿವಾಳಯ್ಯನ ಬಳಿಗೆ ಬಂದಾಗ, ಅವರಿಬ್ಬರಿಗೂ ವಾದವುಂಟಾಗಿ, ಈ ವಿಷಯವು ಹಿರಿಯ ಭಕ್ತರ ಸಮ್ಮುಖ ದಲ್ಲಿಯೇ ತೀರ್ಮಾನವಾಗಬೇಕಾದುದೆಂದು ಬಸವಣ್ಣನಲ್ಲಿಗ ಬರುತ್ತಾರೆ. ಲಿಂಗವು ಬಸವಣ್ಣನಿಗೆ ತಾನು ಪಡೆದಿದ್ದ ಹಣವನ್ನು ಮರಳಿ ನೀಡಿದ ಮೇಲೆ, ಚಂದಯ್ಯನು ಕಾಯಕಮಹತ್ವವನ್ನು ನಿರೂಪಿಸುತ್ತಾನೆ. ಅಲ್ಲಿ ಪ್ರಭುದೇವ, ಚನ್ನಬಸವಣ್ಣ ಬಸವಣ್ಣ ಮುಂತಾದವರು ಚಂದಯ್ಯನೊಡನೆ ಚರ್ಚಿಸಿ ಲಿಂ ವನ್ನು ಮರಳಿ ಧರಿಸಬೇಕೆಂದು ಹೇಳಿದಾಗ ಆತ ಒಡಂಬಡ ತ್ತಾನೆ. ವ್ಯಕ್ತಿಯು ಸಂಪಾದಿಸುವ ಪ್ರತಿಯೊಂದು ಕಾಸು ಅವ ಶ್ರಮ ದುಡಿಮೆಯ ಫಲವಾಗಿರಬೇಕೇ ವಿನಾ ಅನ್ಯಥಾ ಅಲ್ಲ ಕಾಯಕ ತತ್ವದ ಈ ಅಂಶವು ಹಣದ ನಿಜವಾದ ಬೆಲೆಯನ್ನು ತಿಳಿಸುವುದೇ ಅಲ್ಲದೆ ಆತ್ಮಗೌರವವು ದೃಢವಾಗುವುದಕ್ಕೂ ಸಹಾಯಕವಾಗುತ್ತದೆ. ಇಂತಹ ಆತ್ಮಗೌರವವನ್ನು ಬೆಳೆ ಕೊಂಡ ವ್ಯಕ್ತಿ ಸೋಮಾರಿಯಾಗಿ ಕಾಲಕಳೆಯುವುದಾಗಲೀ

ಅನ್ಯರ ಆಶ್ರಯದಲ್ಲಿ ಹಂಗಿನ ಅನ್ನವನ್ನು ತಿನ್ನುವುದಾಗಲೀ, ಭಿಕ್ಷೆಬೇಡಿ ಮೈಗಳ್ಳತನವನ್ನು ಬೆಳಸಿಕೊಂಡಿರುವುದಾಗಲೀ ಅಸಾಧ್ಯವಾಗುತ್ತದೆ.

ಸತ್ಯಶುದ್ಧ ಕಾಯಕದಿಂದ ಹಣ ಸಂಪಾದನೆ ಮಾಡಿದಷ್ಟಕ್ಕೇ ಕಾಯಕದ ಆಚರಣೆಯು ಮುಗಿಯುವುದಿಲ್ಲ; ಇದು ಕಾಯಕದ ಮೊದಲ ಭಾಗ, ಅಷ್ಟೆ. ಅದರ ಮುಂದಿನ ಭಾಗವೆಂದರೆ ತಾನು ಸಂಪಾದಿಸಿದುದರಲ್ಲಿ ತನಗೆ ಬೇಕಾದುದಷ್ಟನ್ನು ಮಾತ್ರ ಇರಿಸಿಕೊಂಡು ಹೆಚ್ಚಿನದನ್ನು ದಾಸೋಹಕ್ಕಾಗಿ ವಿನಿಯೋಗಿಸುವುದನ್ನು ಒಳಗೊಳ್ಳುತ್ತದೆ. ಈ ದಾಸೋಹವು ಕೇವಲ ಯಾರಿಗಂದರೆ ಅವರಿಗೆ ನೀಡುವುದಿಲ್ಲ; ಸತ್ಪಾತ್ರರಿಗೆ, ಎಂದರೆ ಲೋಕಹಿತಾರ್ಥವಾದ ಕಾರ್ಯವನ್ನು ಕೈಗೊಂಡಿರುವವನ ಹೊಣೆಯನ್ನೂಯೋಗಕ್ಷೇಮವನ್ನೂ ಸಮಾಜವು ಹೊರಬೇಕಾದುದರಿಂದ ಅಂತಹವರಿಗೆ ಮಾತ್ರ ದಾನವೀಯಬೇಕು. ಆದರೆ ದಾಸೋಹ ನಡೆಸುವ ಚಾಪಲ್ಯದಿಂದಲೋ, ದಾನಶೂರನೆಂಬ ಕೀರ್ತಿಗಳಿಸಬೇಕೆಂಬ ಆಸೆಯಿಂದಲೋ ಅನ್ಯಾಯದಿಂದ ಹೆಚ್ಚು ಹಣವನ್ನು ಸಂಪಾದಿಸಬಾರದು. ದಾಸೋಹವು ವೀರಶೈವನ ಮುಖ್ಯ ಕರ್ತವ್ಯವಾದರೂ, ಹಾಗೆ ದಾಸೋಹಕ್ಕಾಗಿ ವ್ಯಯಿಸಬೇಕಾದ ದ್ರವ್ಯವು ಋಜುಮಾರ್ಗದಿಂದ ಸಂಪಾದಿಸಿದುದಾಗಿರಬೇಕು. ಶ್ರಮದಿಂದ ಸಂಪಾದಿಸಿದುದನ್ನು ನೀಡುವ ಕಾಲದಲ್ಲಿ ಅನುಭವಕ್ಕೆ ಬರುವ ಧನ್ಯಭಾವವು ಕೊಳ್ಳೆಹೊಡೆದು ಪಡೆದ ಹಣವನ್ನು ದಾನಮಾಡುವಾಗ ಬರಲಾರದು. ಅನ್ಯಾಯದಿಂದ ಅಪಾರ ಐಶ್ವರ್ಯವನ್ನು ಸಂಪಾದಿಸಿ ಅದರಲ್ಲಿ ಒಂದು ಭಾಗವನ್ನು ದಾನವಾಗಿ ನೀಡಿದರೆ ತನ್ನ ಅನ್ಯಾಯದ ಪಾತಕವೂ ಹೋಗಿ ಮೇಲೆ ಪುಣ್ಯವೂ ಒದಗುತ್ತದೆಂಬುದು ತೀರ ಜಾಣರ

ತರ್ಕವಾಗಬಹುದು, ತನ್ನ ಅನ್ಯಾಯ ಗಳಿಕೆಯಲ್ಲಿ ದೇವರಿಗೆ ಅರ್ಥವನ್ನಿತ್ತು ರಾಜಿಮಾಡಿಕೊಳ್ಳುವ ಈ ರೀತಿ ಸಮಾಜದ ಮೇಲೆ ಕೆಲವೇಳೆ ಪರಿಣಾಮ ಬೀರಬಹುದೇ ಹೊರತು ಆತ್ಮ ತೃಪ್ತಿಯನ್ನು ನೀಡಲಾರದು. ಈ ಆತ್ಮತೃಪ್ತಿ, ಒಳ್ಳೆಯ ಕೆಲಸ ಮಾಡಿರುವೆನೆಂಬ ಸಮಾಧಾನಗಳನ್ನೇ ಪುಣ್ಯವೆಂದು ಕರೆಯು ವುದು. ಆದುದರಿಂದ ಈ ತೃಪ್ತಿಯುಂಟಾಗಬೇಕಾದರೆ 'ತನ್ನ' ಹಣವನ್ನೇ ನೀಡಬೇಕು, ಕೊಡುವುದು ಎಷ್ಟೇ ಚಿಕ್ಕದಾಗಲಿ ಅದರ ಹಿನ್ನೆಲೆ ಯೋಗ್ಯವಾದುದಾಗಿರಬೇಕು. "ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ" ಎಂದು ವಚನಕಾರರು ಈ ಕಾರಣಕ್ಕಾಗಿಯೇ ಹೇಳಿದುದು.

ಇಷ್ಟಲ್ಲದೆ ಶರಣನಿಗೆ ತಾನು ಸಂಪಾದಿಸಿದ ಹಣವನ್ನು ಕೂಡಿಡುವ ಬುದ್ಧಿಯಿರಬಾರದು, ಹೆಚ್ಚಿನ ಹಣವನ್ನು ಆಸ್ತಿ ಯಾಗಿ ಪರಿವರ್ತಿಸಬಾರದು. ಮುಂದೇನು ಎಂಬ ಭವಿಷ್ಯದ ಬಗ್ಗೆ ಯೋಚನೆಯಿದ್ದರೆ ಮಾತ್ರ ಈ ಬುದ್ಧಿಯುಂಟಾಗುವುದು. "ಇಂದಿಗೆಂತು ನಾಳಿಗೆಂತೆಂದು ಚಿಂತಿಸಲೇಕೆ? ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥಾ" ಎಂಬ ಜೇಡರ ದಾಸಿ ಮಯ್ಯನ ಈ ವಚನದಲ್ಲಿ ತನ್ನ ಸರ್ವಸ್ವವೂ ಶಿವನಿಂದ ನೀಡ ಲ್ಪಟ್ಟದ್ದೆಂದು ಭಾವಿಸುವ ಭಕ್ತನಿಗೆ ಶಿವನು ಕೊರತೆಯುಂಟು ಮಾಡಲಾರ ಎಂಬ ನಂಬಿಕೆಯು ಅಡಕವಾಗಿದೆ. ಈ ಶಿವನು ಕಾಯಕಸ್ವರೂಪ ಅಷ್ಟೆ. ಎಂದರೆ ತನ್ನ ಕಾಯಕದ ಶಕ್ತಿಯ ಬಗ್ಗೆ ನಂಬಿಕೆಯಿರುವವನಿಗೆ ಮುಂದಿನ ಜೀವನವು ಸಮಸ್ಯೆಯಾಗ ಲಾರದು. ಅಲ್ಲದೆ, ತನ್ನ ಭವಿಷ್ಯಕ್ಕಾಗಿಯೋ ಸಂತಾನಕ್ಕಾಗಿಯೋ ಉಳಿಸಬೇಕೆಂಬ ಆಸೆಯುಂಟಾದಾಗ ಅದನ್ನು ಪೂರ್ಣಗೊಳಿಸುವು

ದಕ್ಕಾಗಿ ಹಣಸಂಪಾದನೆಯ ಮಾರ್ಗವನ್ನು ಹ್ರಸ್ವಗೊಳಿಸ ಬಹುದಾದ ಅಪಾಯವೂ ಉಂಟು. ಅದಕ್ಕೇ ಈ ವಿಷಯವನ್ನು ಎಲ್ಲ ಶರಣರು ಆಸ್ತಿಯ ಭಾವನೆಯನ್ನು ನಿಷೇಧಿಸಿದುದು. ಎಂತಹ ಕಾಲದಲ್ಲಿಯೂ ತನ್ನ ಕಾಯಕವು ತನಗೆ ಜೀವನೋ ಪಾಯವನ್ನೊದಗಿಸುವ ಸಾಮರ್ಥ್ಯದಿಂದ ಕೂಡಿದೆ, ತಾನು ಆ ಕಾಯಕವನ್ನು ಎಲ್ಲ ಕಾಲಗಳಲ್ಲಿಯೂ ನಿರ್ವಹಿಸಬಲ್ಲೆ ಎಂಬ ಆತ್ಮವಿಶ್ವಾಸವಿಲ್ಲದಿದ್ದರೆ ಜೀವನವು ನಿರಾಸೆಯಿಂದ ಕೂಡ ಬಹುದು, ಭವಿಷ್ಯತ್ತು ಅಂಧಕಾರವಾಗಬಹುದು; ಇಂತಹ ನಿರಾಸೆಯಿಂದ ಕೂಡಿದ ಮನಸ್ಸು ಚಿತ್ತೈಕಾಗ್ರತೆಯಿಂದ ಕಾರ್ಯಪ್ರವೃತ್ತವಾಗಲಾರದು ; ಇದರ ಒಟ್ಟು ಪರಿಣಾಮ ವೆಂದರೆ ಕಾಯಕದ ಬಗ್ಗೆ ಅಸಡ್ಡೆ–ಅಪನಂಬಿಕೆಗಳುಂಟಾಗ ಬಹುದು. ಆದ್ದರಿಂದ ಕಾಯಕದಲ್ಲಿ ನಂಬಿಕೆಯಿಟ್ಟವನಿಗೆ ನಾಳಿನ ಆಲೋಚನೆಯಿರಲಾರದು, ಇರಬಾರದು. “ಇಂದಿಗೆ ನಾಳಿಗೆ ಎಂಬ ಸಂದೇಹವಂ ಬಿಟ್ಟು, ಮುಂದಿನ ಕಾಯಕ ಅಂದಂದಿಗೆ ಎಂಬುದ ಸಲೆ ಚಿತ್ತಂ ಬಂದುದ ಕೂಡಿಕೊಂಡು ಲಿಂಗಾರ್ಚನೆಯ ಮಾಡಿ ಸದಾನಂದದಲ್ಲಿಪ್ಪ ಭಕ್ತನಂಗಳ ಮಂಗಳಮಯ ಕೈಲಾಸ”ವೆಂದಂ ಶರಣರು ಸಾರಿದರು. ಕೂಡಿಡದೇ ಇರುವಾಗ ಕಾಯಕದಿಂದಲೇ ಪ್ರತಿನಿತ್ಯವೂ ಜೀವಿಸಬೇಕಾದ ಅನಿವಾರ್ಯತೆಯುಂಟಾಗು ತ್ತದೆ; ಸಾಕಷ್ಟು ಹಣವಿದ್ದಾಗ ಕಾಯಕ ನಡೆಸಲು ಅಲಸ್ಯವು ತಲೆದೋರುತ್ತದೆ.

ನಾಳಿನ ಆಲೋಚನೆಯಿಲ್ಲದೆ ಸಂಪಾದಿಸಬೇಕೆಂದರೆ ತನಗೆ ಮಾತ್ರ ಬೇಕಾಗುವಷ್ಟನ್ನೇ ಗಳಿಸಬೇಕೆಂಬ ಅರ್ಥವಲ್ಲ. ತನ್ನ ಕಾಯಕ ಸಾರ್ಥಕವಾಗುವುದು ಸಂಪಾದನೆಯ ಒಂದು ಭಾಗ ವನ್ನು ದಾಸೋಹಕ್ಕಾಗಿ ವಿನಿಯೋಗಿಸಿದಾಗಲೇ. ಆದ್ದರಿಂದ

ತನಗೆ ಬೇಕಾದುದಕ್ಕಿಂತ ಸ್ವಲ್ಪ ಹೆಚ್ಚನ್ನು ಗಳಿಸಬೇಕು "ಸಜ್ಜನ ಕಾಯಕದಿಂದ ಗುರುಲಿಂಗಜಂಗಮಕ್ಕೆ ಮಾಡಿ ಸತ್ ವಾಗಿಹುದೆ ಸಮಯಾಚಾರ" ವೆಂದು ಹೇಳುವ ಚನ್ನಬಸವಣ್ಣ ಮಾತಿನಲ್ಲಿ ಕಾಯಕ-ದಾಸೋಹಗಳು ಪರಸ್ಪರ ಪೂರಕವಾದು ಗಳೆಂಬ ಭಾವನೆಯು ಸ್ಪಷ್ಟವಾಗಿದೆ. ಕಾಯಕದಿಂದ ಗಳಿಸಿದ ದ್ರವ್ಯವೇ ದಾಸೋಹಕ್ಕೆ ವಿನಿಯೋಗಿಸಲು ಯೋಗ್ಯವಾದುದು ಹಾಗೆ ವಿನಿಯೋಗಿಸಿದಾಗಲೇ ಶ್ರಮವು ಸಾರ್ಥಕವಾಗುವುದೆಂ ವಿಷಯುವನ್ನಾಗಲೇ ನೋಡಿದೆವು. ದಾಸೋಹವನ್ನು ಮಾಡ ದೆಯೇ ತನ್ನಷ್ಟಕ್ಕೆ ತಾನಿರುವುದೂ ಆದರ್ಶದ ಸ್ಥಿತಿಯಲ್ಲ. ದಾಸೋಹ ಮಾಡದೆ ಶ್ರೇಷ್ಠ ಭಕ್ತನಾಗಬಹುದೆಂಬ ಹುಂಬತನ ವನ್ನು ಬಸವಣ್ಣನು ವಿಡಂಬಿಸುತ್ತಾನೆ :

"ಉಂಬಾಗಳಿಲ್ಲೆನ್ನ, ಉಡುವಾಗಲಿಲ್ಲೆನ್ನ,
ಬಂಧುಗಳು ಬಂದಾಗಲಿಲ್ಲೆನ್ನ ;
ಲಿಂಗಕ್ಕೆ ಇಲ್ಲೆಂಬ, ಜಂಗಮಕೆ ಇಲ್ಲೆಂಬ
ಬಂದ ಪುರಾತಂಗೆ ಇಲ್ಲೆಂಬ ;
ಸಾವಾಗ ದೇಹವ ದೇಗುಲಕೆ ಒಯ್ಯೆಂಬ
ದೇವರಿಗೆ ಹೆಣ ಬಿಟ್ಟಿ, ಹೇಳಿತ್ತೆ, ಕೂಡಲಸಂಗಮದೇವಾ."

ಇರುವವರೆಗೂ ಬಂಧು-ಮಿತ್ರರಿಗಾಗಲೀ, ಗುರು-ಜಂಗಮರಿ ಗಾಗಲೀ ಏನನ್ನೂ ನೀಡದೆ ಇರುವವನನ್ನು ಸತ್ತ ನಂತರ ದೈವಸಾನ್ನಿಧ್ಯಕ್ಕೆ ಒಯ್ದರೆ ಅಂತಹವನಿಗೆ ಪುಕ್ಕಟೆ ಪುಣ್ ಬರಲಾರದು. ತನುಮನಧನಗಳನ್ನು ದಂಡಿಸಿ ಗಳಿಸಿದುದನ್ನು ನೀಡಿದಾಗಲೇ ಸಾರ್ಥಕತೆಯುಂಟಾಗುವುದು. "ಕಾಯಕವೆಂದು ಕಾಯುವ ಬಳಲಿಸದೆ, ತನು ಕರಗದೆ ಮನ ನೋಯದೆ ಪುಣ್ಯವು ಅಸಾಧ್ಯವೆಂದು ಶಿವಲೆಂಕ ಮಂಚಣ್ಣ ಹೇಳುತ್ತಾನೆ

ಸತ್ಯ ಶುದ್ಧ ಕಾಯಕವ ಮಾಡಿ ತಂದು ವಂಚನೆಯಿಲ್ಲದೆ ಪ್ರಪಂಚಳಿದ ನಿಚ್ಚ ಜಂಗಮಕ್ಕೆ ದಾಸೋಹವ ಮಾಡುವ ಸದ್ಭಕ್ತನ ಹೃದಯದೊಳಗೆ ಅಚ್ಚೊತ್ತಿದಂತಿಪ್ಪ ಕಾಮಧೂಮ ಧೂಳೇಶ್ವರ" ಎಂದು ಮಾದಾರ ಧೂಳಯ್ಯನು ಕಾಯಕ ದಾಸೋಹದಲ್ಲಿ ನಿರತಾದವನಲ್ಲಿ ಶಿವನು ನೆಲೆಸಿರುತ್ತಾನೆಂದು ಹೇಳುತ್ತಾನೆ.

ಈ ರೀತಿ ಕಾಯಕದ ಕಲ್ಪನೆಯು ಶ್ರಮ–ತೃಪ್ತಿ, ಗಳಿಕೆ–ವ್ಯಯಗಳೆಂಬ ಆರ್ಥಿಕ ಜೀವನದ ಎರಡು ತುದಿಗಳನ್ನೂ ಸರಿಗೊಳಿಸಿ ಸಮತೋಲನವೊದಗುವಂತೆ ಮಾಡುತ್ತದೆ. ಎಲ್ಲರೂ ಕಾಯಕವನ್ನವಲಂಬಿಸಲೇಬೇಕೆಂಬ ಶರಣರ ಆಶಯದಂತೆ ನಡೆದು ಎಲ್ಲ ಜನರೂ ಕಾಯಕಪ್ರವೃತ್ತರಾಗುವುದಾದರೆ ಆಗ ಸಮಾಜದಲ್ಲಿ ಸೋಮಾರಿತನಕ್ಕೆ ಅವಕಾಶವೇ ಇರುವುದಿಲ್ಲ; ಹೀಗೆ ಎಲ್ಲರೂ ಕ್ರಿಯಾಶೀಲರಾದಾಗ ಅನಿವಾರ್ಯವಾಗಿ ದೇಶದ ಸಂಪತ್ತು ವೃದ್ಧಿಯಾಗುತ್ತದೆ. ಆದರೆ ದೇಶದ ಒಟ್ಟು ಸಂಪತ್ತು ಹೆಚ್ಚಿದರೂ, ಅದು ಒಂದೆಡೆಯಲ್ಲಿಯೇ ಕೇಂದ್ರಿಕೃತವಾಗುವುದಾದರೆ ಅದರಿಂದ ಹೆಚ್ಚಿನ ಪ್ರಯೋಜನವಾಗದು. ಹುಟ್ಟಿನ ಹಿನ್ನೆಲೆಯ ಆಧಾರದಿಂದ ತಾರತಮ್ಯವುಂಟಾಗುವಂತೆಯೇ ಉಳ್ಳವರು-ಇಲ್ಲದವರೆಂಬ ಭೇದವೂ ಆಗ ಹೆಚ್ಚಾಗುವ ಅಪಾಯವಿದೆ. ಹಣವನ್ನು ಬೇಕಾದುದಕ್ಕಿಂತ ಹೆಚ್ಚಿಗೆ ಉಳಿಸಿಕೊಳ್ಳದೆ ಉಳಿದುದನ್ನು ಸದ್ವ್ಯಯ ಮಾಡಬೇಕೆಂಬ ನಿಬಂಧನೆಯಿಂದಾಗಿ ದೇಶದ ಅಧಿಕ ಸಂಪತ್ತು ಅವಶ್ಯಕತೆಗನುಗುಣವಾಗಿ ಹಂಚಿಕೆಗೊಳ್ಳಲು ಸಹಾಯಕವಾಗುತ್ತದೆ. ಸಾಧು-ಸಂತರಂತಹ ಸಮಾಜೋದ್ಧಾರಕ ವ್ಯಕ್ತಿಗಳಿಂದಾಗಲೀ, ಬುದ್ಧಿಜೀವಿಗಳಿಂದಾಗಲೀ ನೇರವಾಗಿ ದ್ರವ್ಯರೂಪದ ಉತ್ಪನ್ನವನ್ನು ಯಾರೂ ನಿರೀಕ್ಷಿಸು

ವಂತಿಲ್ಲ. ಆದ್ದರಿಂದ ದೈಹಿಕ ಶ್ರಮದ ಫಲವನ್ನು ಇವರೂ ಪಡೆಯಬೇಕು. ಆದರೆ ಇವರು ಸೋಮಾರಿಗಳಾಗಿರಬೇಕೆಂದಾಗಲೀ ಬೇಡಿ ಹೊಟ್ಟೆಹೊರೆಯಬೇಕೆಂದಾಗಲೀ ಇದರ ಅರ್ಥವಲ್ಲ. ಮಾನಸಿಕ ಶ್ರಮವಹಿಸಿ ದೇಶ–ಸಮಾಜಗಳನ್ನು ಸನ್ನಡತೆಯಲ್ಲಿ ಇವರು ತೊಡಗಿಸುತ್ತಾರೆ. ಹೀಗಾಗಿ ಆರ್ಥಿಕೋತ್ಪನ್ನವು ಶ್ರಮಕ್ಕನುಗುಣವಾಗಿಯೇ ಹಂಚಿಕೆಯಾದಂತಾಗುತ್ತದೆ.

ಕಾಯಕವು ಜೀವನೋಪಾಯ ಹಾಗೂ ಆತ್ಮಸಿದ್ಧಿಗಳೆರಡಕ್ಕೂ ಸಾಧನವಾದುದರಿಂದ ಅದರಲ್ಲಿ ಕೀಳು–ಮೇಲುಗಳೆಂಬ ಭಾವನೆಗೆ ಅವಕಾಶವಿಲ್ಲವೆಂದು ವಚನಕಾರರು ಹೇಳಿದರು. ಏಕೆಂದರೆ ಸಾಧನವೇ ಎಂದಿಗೂ ಗುರಿಯೂ ಅಲ್ಲ, ಅತ್ಯಂತ ಪ್ರಮುಖವಾದುದೂ ಅಲ್ಲ. ಸಾಧನವು ಶ್ರೇಷ್ಠವಾದುದಾಗಿರಬೇಕೆಂದು ಹೇಳುತ್ತೇವಾದರೂ ತನ್ನಲ್ಲಿಯೇ ತನಗೆ ಸಾರ್ಥಕ್ಯವಿಲ್ಲ, ಅದರ ಸಾರ್ಥಕತೆಯಿರುವುದು ಅದರಿಂದ ಹೊರಬರುವ ಫಲದಿಂದಾಗಿ. ಸತ್ಯಶುದ್ಧತೆಯಿಂದಲೂ ಪ್ರಾಮಾಣಿಕತೆಯಿಂದಲೂ ಮಾಡಿದ ಎಲ್ಲ ಕಾಯಕಪ್ರಭೇದಗಳೂ ಜೀವನೋಪಾಯಗಳಿಕೆಗೆ ಹಾಗೂ ಆತ್ಮವಿಕಾಸಕ್ಕೆ ಕಾರಣವಾಗುವುದರಿಂದ ಎಲ್ಲ ಕಾಯಕಗಳ ಪರಿಣಾಮವೂ ಒಂದೇ, ಈ ಪರಿಣಾಮದ ದೃಷ್ಟಿಯಿಂದ ನೋಡಿದಾಗ ಎಲ್ಲ ಕಾಯಕಗಳೂ ಸಾರತಃ ಒಂದೇ ಆಗುತ್ತವೆ. ಆದ್ದರಿಂದ ಎಲ್ಲವೂ ಸಮಾನಶ್ರೇಷ್ಠವಾದುವು. ''ಆವ ಕಾಯಕವ ಮಾಡಿದಡೂ ಒಂದೇ ಕಾಯಕವಯ್ಯ, ಆವ ವ್ರತವಾದರೂ ಒಂದೇ ವ್ರತವಯ್ಯ" ಎಂಬ ಗಂಗಮ್ಮನೆಂಬ ವಚನಕಾರ್ತಿಯೊಬ್ಬಳ ಮಾತುಗಳು ಈ ದೃಷ್ಟಿಯಿಂದ ತುಂಬ ಧ್ವನಿಪೂರ್ಣವಾಗಿವೆ. ಹೇಗೆ ಬೇರೆ ಬೇರೆ ವ್ರತಗಳೂ ಬಾಹ್ಯ ಸ್ವರೂಪದಲ್ಲಿ ವ್ಯತ್ಯಾಸಗಳನ್ನು ಪಡೆದಿದ್ದರೂ ಅವೆಲ್ಲ ಭಕ್ತಿಯ

ಅಭಿವ್ಯಕ್ತಿ ಸಾಧನಗಳೋ ಹಾಗೆಯೇ ಎಲ್ಲ ಬಗೆಯ ಕಾಯಕ ಗಳೂ ಆತ್ಮ ವಿಕಾಸ-ಆರ್ಥಿಕೋನ್ನತಿಗಳಿಗಾಗಿರುವ ಸಮಾನ ಫಲ ಕಾರಿಯಾದ ಕ್ರಿಯಾಸ್ವರೂಪಗಳು ಎಂಬುದು ಈ ವಚನಭಾಗದ ಅಭಿಪ್ರಾಯವಾಗಿದೆ. ಆದ್ದರಿಂದ ವ್ಯಕ್ತಿಗಳು ಅನುಸರಿಸುವ ಕಾಯಕಸ್ವರೂಪವೇ ಅವರಲ್ಲಿ ತಾರತಮ್ಯವನ್ನುಂಟುಮಾಡಲು ಕಾರಣವಾಗಬಾರದು. ಜಾತಿಗೂ-ವೃತ್ತಿಗೂ ಹೇಗೋ ಗಂಟು ಬಿದ್ದಿತು; ಜಾತಿಗಳಲ್ಲಿ ಮಾಡಿದಂತೆಯೇ ವ್ಯಕ್ತಿಗಳಲ್ಲೂ ಕೀಳು-ಮೇಲುಗಳೆಂದು ವ್ಯತ್ಯಾಸಮಾಡಿದುದು ವಚನಕಾರರಲ್ಲಿ ತುಂಬ ನೋವನ್ನುಂಟುಮಾಡಿರಬೇಕು. ವ್ಯಕ್ತಿಯು ಅನುಸರಿಸುವ ವೃತ್ತಿಯು ಕೆಲವು ವೇಳೆ ಅವನಿಗೆ ಅನಿವಾರ್ಯವಾಗಿದ್ದಿರ ಬಹುದು. ಆದರೆ ಸ್ವಇಚ್ಛೆಯಿಂದ ಅನುಸರಿಸುವ ವೃತ್ತಿಗಳು ವ್ಯಕ್ತಿಗಳ ಮನೋಭಾವ ಹಾಗೂ ಸ್ವಸಾಮರ್ಥ್ಯಗಳನ್ನವಲಂಬಿ ಸಿರುವಂತಹವು. ಎಲ್ಲರೂ ಎಲ್ಲ ಬಗೆಯ ಕೆಲಸಗಳನ್ನೂ ಮಾಡಲಾರರು. ಬೌದ್ಧಿಕವಾಗಿ ಎಷ್ಟಾದರೂ ಶ್ರಮವಹಿಸಿ ಜ್ಞಾನಾರ್ಜನೆ-ಜ್ಞಾನಪ್ರಸಾರಕಾರ್ಯಗಳಲ್ಲಿ ತೊಡಗಿರುವವನಿಗೆ ಹೆಚ್ಚು ದೈಹಿಕಶ್ರಮವನ್ನು ತಾಳಲಾಗದೇ ಹೋಗಬಹುದು. ಹಾಗೆಯೇ ದೈಹಿಕ ಶ್ರಮಕ್ಕೆ ಲೆಕ್ಕಿಸದ ವ್ಯಕ್ತಿಯು ಮಾನಸಿಕ ಶ್ರಮವನ್ನು ತಾಳಲಾಗದಿರಬಹುದು, ಮಿದುಳು ಚುರುಕಾಗಿ ಓಡದಿರಬಹುದು. ಆದರೆ ವ್ಯಕ್ತಿಜೀವನಕ್ಕೆ ಹೇಗೋ ಹಾಗೆಯೇ ಸಮಾಜ ಜೀವನಕ್ಕೂ ಈ ಎರಡೂ ಬಗೆಯ ದುಡಿಮೆ ಅವಶ್ಯಕ. ಆದರೆ ಒಬ್ಬನೇ ಇವೆರಡನ್ನೂ ತೃಪ್ತಿಕರ ವಾಗಿ ಮಾಡಲಾರದಾದಾಗ ಇಬ್ಬರೂ ಪರಸ್ಪರರನ್ನವಲಂಬಿಸ ಬೇಕಾಗುತ್ತದೆ. ಬುದ್ಧಿಜೀವಿಗಳ ಮಾನಸಿಕ ಶ್ರಮದ ಫಲವು ಶ್ರಮಜೀವಿಗಳಿಗೂ, ಅವರ ದುಡಿಮೆಯ ಫಲವು ಇತರರಿಗೂ

ಅವಶ್ಯಕತೆಗನುಗುಣವಾಗಿ ವಿನಿಮಯಗೊಳ್ಳಬೇಕು ; ಇಂತಹ ವಿನಿಮಯ ಸಮಾಜದ ಸಮತೋಲನಕ್ಕೂ, ಆರ್ಥಿಕಾಭಿವೃದ್ಧಿಗೂ, ಜೀವನಾರೋಗ್ಯಕ್ಕೂ ಅನಿವಾರ್ಯವಾದುದು. ಈ ದೃಷ್ಟಿಯಿಂದ ಎಲ್ಲ ಕಾಯಕವು ಸಮಾನ ಶ್ರೇಷ್ಠ. ಒಳಹೊಕ್ಕು ನೋಡಿದಾಗ ಕಾಯಕವು ಸರಳವಾದ ರೀತಿಯಲ್ಲಿ ಆರ್ಥಿಕ ಜೀವನದ ಮುಖ್ಯ ಅಂಶಗಳಾದ ಉತ್ಪನ್ನ-ಹಂಚಿಕೆಗಳಲ್ಲಿ ಸಮತೋಲವನ್ನುಂಟುಮಾಡುವುದನ್ನು ಕಾಣಬಹುದು

ಎಲ್ಲರೂ ಮನೋಭಾವಕ್ಕನುಗುಣವಾದ ವೃತ್ತಿಗಳನ್ನೇ ಆರಿಸಿಕೊಳ್ಳುತ್ತಾರೆಂದು ಹೇಳಲಾಗುವುದಿಲ್ಲ. ಯಾವುದೋ ಒಂದು ವೃತ್ತಿಯನ್ನು ಅವಲಂಬಿಸಿರುವ ಕುಟುಂಬದಲ್ಲಿ ಜನಿಸಿರುವವನಿಗೆ ಕೌಟುಂಬಿಕ ವಾತಾವರಣವು ಪರಿಣಾಮಕಾರಿಯಾಗಿರುವುದರಿಂದ ಅವನಿಗೆ ಕುಟುಂಬದ ವೃತ್ತಿಯ ಬಗ್ಗೆ ಆಸಕ್ತಿ–ಪರಿಣತಿಗಳು ಸಹಜವಾಗಿಯೂ ಸುಲಭವಾಗಿಯೂ ಉಂಟಾಗುತ್ತದೆ. ಹನ್ನೆರಡನೆಯ ಶತಮಾನ ಕಾಲದ ಕನ್ನಡ ನಾಡಿನ ಆರ್ಥಿಕ ಜೀವನವನ್ನು ನಾವು ದೃಷ್ಟಿಯಲ್ಲಿಟ್ಟುಕೊಂಡರೆ, ಆಗ ಕೌಟುಂಬಿಕ ವೃತ್ತಿಗಳನ್ನು ಬದಲಾಯಿಸುತ್ತಿದ್ದುದು ಅಪರೂಪವಾಗಿತ್ತು. ಎಂದರೆ ರೈತರು ಕಮ್ಮಾರಿಕೆಯನ್ನಾಗಲೀ, ಗೋವಳಿಗನು ಬಡಗಿತನವನ್ನಾಗಲೀ ಅನುಸರಿಸುತ್ತಿದುದು ಅಸಂಭವೆನ್ನುವಷ್ಟು ಕಡಿಮೆಯಾಗಿತ್ತು. ಇದಕ್ಕೆ ಎರಡು ಬಗೆಯ ಕಾರಣಗಳಿದ್ದುವು : ಒಂದು, ಒಬ್ಬರ ವೃತ್ತಿಯನ್ನು ಮತ್ತೊಬ್ಬರು ಅವಲಂಬಿಸುವುದರಿಂದ ಆ ವೃತ್ತಿಯಲ್ಲಿ ಸ್ಪರ್ಧೆಯು ಹೆಚ್ಚಿ ಅವಕಾಶಗಳು ಕಡಿಮೆಯಾಗುವುದು (ಪ್ರಾಯಶಃ ಈ ಕಾರಣದಿಂದಲೇ ವೃತ್ತಿಯು ಜಾತಿಗೇ ಅಂಟಿಕೊಂಡು ಸಂಪರ್ಕಹೀನತೆಯುಂಟಾದುದು) ಎರಡು, ಕಮ್ಮಾರನ ಕುಟುಂಬದಲ್ಲಿ

ಜನಿಸಿದವನು, ತನ್ನ ತಾರುಣ್ಯದಲ್ಲಿ ಬಡಗಿತನವನ್ನು ಕಲಿಯಲು ಪ್ರಾರಂಭಿಸಿದರೆ, ಅವನು ಕಮ್ಮಾರಿಕೆಯನ್ನು ಅನುಸರಿಸಿದ್ದರೆ ಎಷ್ಟು ಪರಿಣತಿಯನ್ನು ಪಡೆಯಲು ಸಾಧ್ಯವಿದ್ದಿತೋ ಅಷ್ಟರ ಮಟ್ಟಿನ ಪರಿಣತಿಯು ಬಡಗಿತನದಲ್ಲಿ ಅವನಿಗುಂಟಾಗಲಾರದು. ಹೀಗಾಗಿ ಆ ಕಾಲದಲ್ಲಿ ವೃತ್ತಿಯು ಅನುವಂಶಿಕವಾಗಿಯೇ ಮುಂದುವರೆಯಿತು. ಆದರೆ ಇಷ್ಟಕ್ಕೇ ಪಾರಂಪರಿಕವಾದ ವೃತ್ತಿಗೆ ಕಳಂಕ ತಟ್ಟಲು ಯಾವ ಕಾರಣವೂ ಇಲ್ಲ ಎಂಬುದು ವಚನಕಾರರ ವಾದ. "ಕಾಸಿ ಕಮ್ಮಾಱನಾದ, ಬೀಸಿ ಮಡಿವಾಳ ನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವ ನಾದ, ಕರ್ಣದಲ್ಲಿ ಜನಿಸಿದವರುಂಟೆ ಜಗದಲ್ಲಿ?" ಎಂಬ ಬಸವಣ್ಣನ ಮಾತಿನಲ್ಲಿ ಕಾಯಕವೈಶಿಷ್ಟ್ಯದಿಂದಾಗಿ ಒಬ್ಬನನ್ನು ಒಂದು ಜಾತಿಗೆ ಸೇರಿದವನೆಂದು ಕರೆಯಬಹುದೇ ಹೊರತು ಅದು ತಾರತಮ್ಯಕ್ಕೆ ಕಾರಣವಾಗಬಾರದೆಂದೂ, ಎಲ್ಲರ ಜನನವೂ ಒಂದೇ ರೀತಿಯಲ್ಲಾಗುವುದರಿಂದ ಅನಂತರದ ಜೀವನದಲ್ಲಿ ಕಚ್ಚಾಟಕ್ಕೆ ಆಸ್ಪದವಿರಬಾರದೆಂಬ ಭಾವನೆಯು ಸರಳವಾಗಿ ಯಾದರೂ ಸುಂದರವಾಗಿ ಮೂಡಿದೆ. ಬಸವಣ್ಣನ ಈ ಮಾತನ್ನೇ ಜಾತಿ-ವೃತ್ತಿಗಳ ಬಗೆಗೆ ಆ ಕಾಲದ ಶಿವಶರಣರ ಧೋರಣೆಯನ್ನಾಗಿ ಭಾವಿಸಬಹುದು.

# ಶರಣರ ಕಾಯಕನಿಷ್ಠೆ

ಕಾಯಕವು ಭೇದಭಾವಕ್ಕೆ ಆಸ್ಪದವೀಯಬಾರದೆಂಬುದು ಶರಣರ ಉಪದೇಶ ಮಾತ್ರವಾಗಿರದೆ ಅದರಂತೆಯೇ ಹಲವಾರು ಮಂದಿ ನಡೆದುಕೊಂಡರೆಂಬುದನ್ನು ನಾವು ಕಾಣಬಹುದು. ಬಸವಣ್ಣನ ಒಂದು ವಚನವು ಕಾಯಕಫಲದ ಬಗ್ಗೆ ವಚನಕಾರರು ಪಡೆದಿದ್ದ ನಿಲುವನ್ನು ಸೂಚಿಸುತ್ತದೆ :

"ನಾನು ಆರಂಭವ ಮಾಡುವೆನಯ್ಯಾ ಗುರು ಪೂಜೆಗೆಂದು,
ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು,
ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು,
ನಾನಾವಾವ ಕರ್ಮಂಗಳ ಮಾಡಿದಡೆಯೂ
ಆ ಕರ್ಮಫಲಭೋಗವ ನೀ ಕೊಡುವೆ ಎಂಬುದ ನಾನು ಬಲ್ಲೆನು
ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರೀಯ ಮಾಡೆನು ;
ನಿಮ್ಮ ಸೊಮ್ಮಿಂಗೆ ಸವೆಸುವೆನು, ನಿಮ್ಮಾಣೆ,
ಕೂಡಲಸಂಗಮದೇವಾ."

ಬಸವಣ್ಣನೇ ಮತ್ತೊಂದೆಡೆ, ತಾನು ಭವಿಯಾದ ಬಿಜ್ಜಳನಲ್ಲಿ ಊಳಿಗಕ್ಕಿರುವುದು ಕೇವಲ ಹಣದಾಸೆಯಿಂದಲಲ್ಲ, ಅಥವಾ ತಾನೊಂದು ಉನ್ನತ ಹುದ್ದೆಯಲ್ಲಿರುವೆನೆಂಬ ಅಹಂಕಾರ ದಿಂದಲೂ ಅಲ್ಲ, ತಾನು ಕಾಯಕವೊಂದನ್ನು ಅನುಸರಿಸ ಬೇಕಾದುದು ಆವಶ್ಯಕವೆಂಬ ದೃಷ್ಟಿಯಿಂದ ಮಾತ್ರ ಎಂದು

ಹೇಳಿಕೊಳ್ಳುತ್ತಾನೆ; ಹಾಗೆಯೇ ತಾನು ಮಾಡುತ್ತಿರುವ ಕೆಲಸವು ಕೈಕೂಲಿಗಿಂತ ಮಿಗಿಲಾದುದೆಂಬ ಭಾವನೆಯೂ ತನಗಿಲ್ಲ ವೆಂದೂ ನುಡಿಯುತ್ತಾನೆ ("ಭವಿ ಬಿಜ್ಜಳ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯಾ ಪ್ರಮಥರು, ಕೊಡುವೆನೆ ಉತ್ತರವನವರಿಗೆ ? ಕೊಡಲಮ್ಮ ! ಹೊಲೆ ಹೊಲೆ ಯರ ಮನೆಯ ಹೊಕ್ಕಾದಡೆಯೂ ಸಲೆ ಕೈಕೂಲಿಯ ಮಾಡಿ ಯಾದಡೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲವೆ, ಎನ್ನ ಒಡಲವ ಸರಕ್ಕೆ ಕುದಿದೆನಾದಡೆ ತಲೆದಂಡ ! ಕೂಡಲಸಂಗಮದೇವಾ"). ಅಲ್ಲದೆ ಬಸವಣ್ಣ ಮತ್ತಿತರ ಹಲವರು ವಚನಕಾರರು ತಮ್ಮ ಹಲವಾರು ವಚನಗಳಲ್ಲಿ ಅನೇಕ ಇತರ ಶರಣರ ಬಗ್ಗೆ ತೋರಿ ಸುವ ಭಕ್ತ್ಯಾದರಗಳಲ್ಲಿ ಇಂತಹುದೇ ಸಮಾನತೆಯ ಭಾವನೆಯು ವ್ಯಕ್ತವಾಗಿದೆ.

ಶುದ್ಧವಾದ ಜೀವನದಲ್ಲಿ ಕಾಯಕದ ಸ್ಥಾನವು ತುಂಬ ಮಹತ್ವಪೂರ್ಣವಾದುದರಿಂದ ಶರಣರೆಲ್ಲ ತಮ್ಮ ತಮ್ಮ ವೃತ್ತಿ ಯನ್ನೇ ಕಾಯಕದ ಸ್ಥಾನಕ್ಕೇರಿಸಲು ಪ್ರಯತ್ನಿಸಿದರು. ಪ್ರಮಥರ ಅಂಗಳದಲ್ಲಿ ಬಿದ್ದ ಅಕ್ಕಿಯ ಕಾಳುಗಳನ್ನಾಯ್ದು ಕೊಂಡು ಜೀವನವನ್ನು ನಡೆಸುತ್ತಿದ್ದವರು ಆಯ್ದಕ್ಕಿಯ ಮಾರಯ್ಯ ದಂಪತಿಗಳು. ಬಡವರಾದರೂ ಅವರದು ತುಂಬು ಆತ್ಮಾಭಿಮಾನ. ಆಯ್ದಕ್ಕಿ ಮಾರಯ್ಯನು ಒಮ್ಮೆ ಪ್ರಭು ದೇವರು ಮತ್ತಿತರರ ಜೊತೆಯಲ್ಲಿ ಆಧ್ಯಾತ್ಮಿಕ ವಿಷಯವಾದ ಚರ್ಚೆಯಲ್ಲಿ ಮುಳುಗಿರುವಾಗ "ಆ ಪ್ರಸ್ತಾವದೊಳು ಆಯ್ದ ಕ್ಕಿಯ ಮಾರಯ್ಯಗಳ ಪುಣ್ಯಾಂಗನೆಯ ಲಕ್ಕಮ್ಮಗಳು ಬಂದು ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಗಣಂಗಳಿಗೆ ನಮಸ್ಕರಿಸಿ, ತಮ್ಮ ಪತಿಗೆ ಕಾಯಕ ನಿಂದಿತ್ತು ಹೋಗಯ್ಯಾ

ಎನ್ನಾಳ್ದನೆ ಎಂದು ಬಿನ್ನೈಸಿ ಕಳುಹು"ವ ಪ್ರಸಂಗವು 'ಶೂನ್ಯ ಸಂಪಾದನೆ'ಯಲ್ಲಿದೆ. ಈ ಸಂದರ್ಭವು ಕಾಯಕದ ಬಗ್ಗೆ ಶರಣರ ಹೊಂದಿದ್ದ ಭಾವನೆಯನ್ನು ತುಂಬ ಸಮರ್ಥವಾಗಿ ಅಭಿವ್ಯಕ್ತ ಗೊಳಿಸುತ್ತದೆ. ಚರ್ಚೆಯನ್ನು ನಿಲ್ಲಿಸಿದ್ದಕ್ಕಾಗಿ ಪ್ರಭುದೇವ ನಾಗಲೀ ಮಾರಯ್ಯನಾಗಲೀ ಕೋಪ–ಬೇಸರಗಳನ್ನೇನೂ ತಾಳುವುದಿಲ್ಲ ; ಚರ್ಚೆಯು ಮುಖ್ಯವಾದರೂ ಕಾಯಕವು ಅದಕ್ಕಿಂತ ಮುಖ್ಯವಾದುದೆಂದು ಅವರಿಬ್ಬರೂ ಬಲ್ಲರು. ಅನಂತರ ಮಾರಯ್ಯನು ಕಾಯಕಕ್ಕೆ ಬಂದು ಬಸವಣ್ಣನು ಮನೆಯ ಅಂಗಳದಲ್ಲಿದ್ದ ಅಕ್ಕಿಯ ಕಾಳನ್ನು ಎಂದಿಗಿಂತ ಅಧಿಕ ವಾಗಿ ಆರಿಸಿ ತಂದಾಗ ಲಕ್ಕಮ್ಮನು "ಒಮ್ಮನವ ಮೀಱಿ ಇಮ್ಮನದಲ್ಲಿ ತಂದಿರಿ. ಇದು ನಿಮ್ಮ ಮನವೋ ? ಬಸವಣ್ಣನ ಅನುಮಾನದ ಚಿತ್ತವೋ ? ಈ ಮಾತು ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ ಸಲ್ಲದ ಬೋನ. ಅಲ್ಲಿಯೆ ಸುರಿದು ಬನ್ನಿ ಮಾರಯ್ಯ" ಎಂದು ಹೇಳಿ ಕಳಿಸುತ್ತಾಳೆ.

ವೀರಶೈವ ಪುರಾಣಗಳ ಪ್ರಕಾರ ಮತ್ತೊಬ್ಬ ಮಾರಯ್ಯನು ಪೂರ್ವದಲ್ಲಿ ಕಾಶ್ಮೀರದ ಒಬ್ಬ ರಾಜನಾಗಿದ್ದವನು. ಆತನು ಬಸವಣ್ಣನ ಹಿರಿಮೆ-ವರ್ಚಸ್ಸುಗಳಿಂದ ಆಕರ್ಷಿತನಾಗಿ ತನ್ನ ರಾಜತ್ವವನ್ನೂ ತ್ಯಜಿಸಿ ಕಲ್ಯಾಣಕ್ಕೆ ಬಂದು ಕಟ್ಟಿಗೆಯ ಹೊರೆ ಯನ್ನು ಕಾಡಿನಿಂದ ತಂದು ಮಾರಿ ಜೀವಿಸುವ ಕಾಯಕವನ್ನು ಅನುಸರಿಸುತ್ತಾನೆ. ಆಗ ಆತ ಮೋಳಿಗೆ ಮಾರಯ್ಯನಾದ. ಒಂದು ಸಂದರ್ಭದಲ್ಲಿ, ಕೆಲವು ಜಂಗಮರು ಮೋಳಿಗೆ ಮಾರಯ್ಯನ ಮನೆ ಯಲ್ಲಿ ನೀಡಿದ ಅಂಬಳಕ (ಅಂಬಲಿ ಮಜ್ಜಿಗೆ) ವನ್ನು ಸ್ವೀಕರಿಸಿ ಅದರ ಸೊಗಸನ್ನು ಬಸವಣ್ಣನ ಮುಂದೆ ವರ್ಣಿಸಿ ಹೇಳಿದಾಗ ಆತ ಬಡವರಾದ ಮಾರಯ್ಯ ದಂಪತಿಗಳಿಗೆ ಸಹಾಯಮಾಡ

ಬೇಕೆಂದು ನಿರ್ಧರಿಸುತ್ತಾನೆ. ಆ ರೀತಿ ಆಲೋಚಿಸಿ ಎರಡು ಚೀಲಗಳಲ್ಲಿ ಹಣವನ್ನು ತುಂಬಿಕೊಂಡು ಮಾರಯ್ಯನ ಮನೆಗೆ ಬಂದಾಗ, ಮಾರಯ್ಯನು ಕಾಯಕಕ್ಕಾಗಿ ಹೋಗಿರುತ್ತಾನೆ, ಮನೆಯಲ್ಲಿ ಹೆಂಡತಿ ಮಹಾದೇವಿಯು ಮಾತ್ರ ಇರುತ್ತಾಳೆ. ಬಸವನು ತನ್ನ ಮನೆಗೆ ಬಂದುದನ್ನು ಕಂಡು ಆಕೆಯು ಭಕ್ತಿ-ಗೌರವಗಳಿಂದ ಆತನ ಕಾಲುಗಳಿಗೆ ನೀರಿತ್ತು, ಶಿವಪೂಜೆಯನ್ನು ಮಾಡಿಸಿ, ದಾಸೋಹವನ್ನು ಮಾಡುತ್ತಾಳೆ. ಅದನ್ನು ಸ್ವೀಕರಿಸಿದ ಬಸವಣ್ಣನು ಮರಳಿ ಬರುವಾಗ ಮರೆಯಲ್ಲಿ ತಾನು ತಂದಿದ್ದ ಹಣದ ಚೀಲಗಳನ್ನಿಟ್ಟು ಬರುತ್ತಾನೆ. ಸ್ವಲ್ಪ ಸಮಯದ ನಂತರ ಕಟ್ಟಿಗೆಯ ಹೊರೆಯನ್ನು ಹೊತ್ತುತಂದು ಮಾರಯ್ಯನು ಅದನ್ನಿಳಿಸಿ ಕಾಲು ತೊಳೆದುಕೊಂಡು ಲಿಂಗಾರ್ಚನೆ ಮಾಡುವಾಗ ಮರೆಯಲ್ಲಿದ್ದ ಹಣದ ಚೀಲಗಳನ್ನು ಕಾಣುತ್ತಾನೆ. ತಮ್ಮ ಮನೆಗೆ ಯಾರು ಬಂದಿದ್ದರೆಂದು ಹೆಂಡತಿಯನ್ನು ವಿಚಾರಿಸಿ ತಿಳಿದು,ತಮ್ಮಲ್ಲಿಗೆ ಬಂದಿದ್ದ ಬಸವಣ್ಣನು "ನಾವು ಬಡವರೆಂದು ಬಸವಣ್ಣನು ಗರ್ವದಿಂದ ಜಾಳಿಗೆ ಹೊನ್ನ ಮಡಗಿ ಹೋದನೆಂದು ಕನಲಿ" ಜರೆಯುತ್ತಾನೆ. ಅನಂತರ ಆ ಹೊನ್ನನ್ನು ಜಂಗಮರಿಗೆ ದಾನವಾಗಿತ್ತು, ತನ್ನ ಮಹಿಮೆಯಿಂದ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ ತೃಪ್ತಿಯಾಗುವಂತೆ ಪದಾರ್ಥಗಳನ್ನೀಯುತ್ತಾನೆ; ಆಮೇಲೆ ತಾನು ತಂದಿದ್ದ ಕಟ್ಟಿಗೆ ಹೊರೆಯ ಮೇಲೆ ಪಾದೋದಕವನ್ನು ಸಂಪ್ರೋಕ್ಷಿಸಿದಾಗ ಅಲ್ಲಿದ್ದ ಕಟ್ಟಿಗೆಯೆಲ್ಲ ಚಿನ್ನದ ದಂಡಗಳಾಗುತ್ತವೆ. ಅವೆಲ್ಲವನ್ನೂ ಜಂಗಮರಿಗೆ ದಾನಮಾಡಿದಾಗ ಅವರಲ್ಲಿ ಹಲವರು ಬಸವಣ್ಣನಲ್ಲಿಗೆ ಬರಲು, ಆತನು ಕುತೂಹಲದಿಂದ ಆ ಸುವರ್ಣದಂಡಗಳು ಎಲ್ಲಿಯವೆಂದು ವಿಚಾರಿಸುತ್ತಾನೆ. ನಿಜಸ್ಥಿತಿಯನ್ನರಿತು

ಮೋಳಿಗೆಯ ಮಾರಯ್ಯನು ಇಂತಹ "ನಿರಾಶಾ ಮಹಾತ್ಮ" ನೆಂದರಿಯದೆ ತಾನೆಂತಹ ಅಪರಾಧವನ್ನು ಮಾಡಿದೆನೆಂದು ಅನುತಾಪಪಟ್ಟು ಮೋಳಿಗಯ್ಯನಲ್ಲಿ ಬಂದು ಕ್ಷಮಾಯಾಚನೆ ಮಾಡುತ್ತಾನೆ. ಈ ಪ್ರಕರಣಗಳಿಂದ ನಿಷ್ಠೆಯಿಂದ ಮಾಡಿದ ಕಾಯಕವು ಎಂತಹ ಶಕ್ತಿಯನ್ನೂ ಆತ್ಮಾಭಿಮಾನವನ್ನೂ ನೀಡು ತ್ತದೆಂಬುದು ಸೂಚಿತವಾಗಿದೆ.

ಸೂಳೆಯ ಸಂಕವ್ವೆಯೆಂಬ ವಚನಕಾರ್ತಿಯೊಬ್ಬಳ ಕಾಯ ಕವು ಹೆಸರೇ ಸೂಚಿಸುವಂತೆ ವೇಶ್ಯಾವೃತ್ತಿ. ಪ್ರಾಯಶಃ ವಂಶ ಪಾರಂಪರ್ಯವಾಗಿ ಬಂದ ಆ ವೃತ್ತಿಯನ್ನು ಆಕೆಯು ತುಂಬ ನಿಷ್ಠೆಯಿಂದ ನಡೆಸುತ್ತಿದ್ದವಳು. ಸಮಾಜದ ದೃಷ್ಟಿಯಿಂದ ಅವಳ ವೃತ್ತಿಯು ಕೀಳೆನಿಸಬಹುದಾದರೂ ಅದರ ಬಗ್ಗೆ ಅವಳು ಪಡೆದಿದ್ದ ಮನೋಭಾವ ಮತ್ತು ಅದನ್ನವಳು ಅನುಸರಿಸುತ್ತಿದ್ದ ರೀತಿಯು ಅವಳನ್ನು ಉನ್ನತಿಗೇರಿಸಿತು. ನಮಗೀಗ ದೊರಕಿ ರುವ ಅವಳ ಒಂದೇ ಒಂದು ವಚನವು ಈ ರೀತಿಯಾಗಿದೆ:

"ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ ;
ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯ.
ವ್ರತಹೀನನನರಿದು ಬೆರೆದಡೆ,
ಕಾದ ಕತ್ತಿಯಲ್ಲಿ ಕೈಕಿವಿ ಮೂಗ ಕೊಯ್ವರಯ್ಯ.
ಒಲ್ಲೆನೊಲ್ಲೆ, ಬಲ್ಲೆನಾಗಿ, ನಿಮ್ಮಾಣೆ ನಿರ್ಲಜ್ಜೇಶ್ವರಾ"

ಈ ವಚನದಲ್ಲಿ ಅವಳ ಇಮ್ಮುಖವಾದ ನಿಷ್ಠೆಯು ವ್ಯಕ್ತವಾಗಿದೆ. ಒಬ್ಬನಿಂದ ಒತ್ತೆಯನ್ನು ಸ್ವೀಕರಿಸಿ ಅವನೊಡನೆ ಕೂಡುವೆನೆಂದು ಒಪ್ಪಿಗೆಯಿತ್ತ ಮೇಲೆ ಮತ್ತೊಬ್ಬನನ್ನು ಕೂಡದಿರುವುದು ; ಹಾಗೆಯೇ ತಾನು ಬೆರೆಯುವುದು ಭಕ್ತರೊಡನೆ ಮಾತ್ರವೇ ಹೊರತು ಭವಿಗಳೊಡನೆ ಅಲ್ಲ ಎಂಬುದು. ಭಕ್ತರೊಡನೆ

ಮಾತ್ರ ಸೇರುವ ಈಕೆಯ ನೇಮವು ಬಸವಪುರಾಣದಲ್ಲಿ ಚಿತ್ರಿತ ವಾದ ಮುಗ್ಧ ಸಂಗಯ್ಯನ ಕತೆಯಲ್ಲಿ ಬರುವ ವೇಶ್ಯೆಯೊಬ್ಬಳ ಸ್ವಭಾವವನ್ನು ನೆನಪಿಗೆ ತರುತ್ತದೆ: ಹಲವರು ಜಂಗಮರು ವೇಶ್ಯೆಯ ಮನೆಗೆ ಹೋಗುತ್ತಿದ್ದುದನ್ನು ಕಂಡ ಮುಗ್ಧ ಸಂಗಯ್ಯನೆಂಬ ಮುಗ್ಧಭಕ್ತನು ಅದೂ ಶಿವಪೂಜೆಯ ಬಗೆ ಯೆಂದು ಭಾವಿಸಿ ತಾನೂ ಹೋಗಲು ನಿರ್ಧರಿಸಿ ಒಬ್ಬಳು ವೇಶ್ಯೆಯ ಮನೆಗೆ ಬರುತ್ತಾನೆ; ಅಲ್ಲಿ ಆಕೆಯು ತನ್ನ ಕಾಯಕ ವನ್ನು ವಿವರಿಸುತ್ತ, ತಾವು ಪಾರ್ವತಿಯ ಸಂತತಿಯವರೆಂದೂ ಹೇಳಿ ಈ ರೀತಿ ಕಾಯಕವನ್ನು ವರ್ಣಿಸುತ್ತಾಳೆ: "ತನುಮನಧನ ವೆಂಬವಂ ವಂಚನೆಗಳಿಲ್ಲದ ಕೊಟ್ಟು ರಸಿಕದಿ ಮನಸು ಕರಗಿಸಿ ಮೇಳರಾಗಿ ನಿಮಗ್ನಗೋಷ್ಠಿಯಲಿ ಅನುನಯದೊಳೊಂದಿಪ್ಪ ಜಂಗಮದನುಭವಂಗಳೊಳಿಪ್ಪೆನಗಲದೆ ಅನಘಲಿಂಗಾರ್ಚನೆಯ ದಲ್ಲದೆ ಕೆಲಸವೊಂದುಂಟೆ?" ಎಂದರೆ ಆಕೆಗೆ ತನ್ನ ವೃತ್ತಿಯು ಕೀಳೆಂಬ ಭಾವನೆಯಾಗಲೀ, ತಾನು ಅದನ್ನು ಅನುಸರಿಸುತ್ತಿರು ವುದರಿಂದ ಪಾತಕಿಯಾಗಿದ್ದೇನೆಂಬ ಪಶ್ಚಾತ್ತಾಪವಾಗಲೀ ಇರ ದಿರವುದಕ್ಕೆ ಕಾರಣ ತನಗೆ ಹೇಗೋ ಒದಗಿಬಂದ ವೃತ್ತಿಯು ಶಿವಪೂಜೆಯಷ್ಟೇ ಪವಿತ್ರವಾದುದೆಂಬ ಭಾವನೆ ಆಕೆಯಲ್ಲಿ ದೃಢವೇ ಆಗಿದೆ.

# ಶರಣರ ಕಾಯಕ ವೈವಿಧ್ಯ

---

ವಚನಕಾರರೆಲ್ಲ ಒಬ್ಬೊಬ್ಬರೂ ಒಂದೊಂದು ವೃತ್ತಿಯನ್ನವಲಂಬಿಸಿದ್ದವರಾದರೂ ಪರಸ್ಪರ ತಾರತಮ್ಯಗಳಿಲ್ಲದೆ ನಡೆದುಕೊಂಡವರು. ಹಾಗಿಲ್ಲದಿದ್ದರೆ ಆಗಿನ ವೀರಶೈವ ಚಳುವಳಿಯು ಜನತೆಯನ್ನು ಒಳಗೊಳ್ಳುವಂತಾಗುವುದು ಸಾಧ್ಯವಿರಲಿಲ್ಲ. ನಮಗೆ ದೊರೆಯುವ ವಚನಗಳ ಆಧಾರದ ಮೇಲೆ ಹೇಳುವುದಾದರೆ ಆಗಿನ ವೀರಶೈವ ಚಳುವಳಿಯಲ್ಲಿ ಆಗಿನ ವೃತ್ತಿಗಳನ್ನನುಸರಿಸುತ್ತಿದ್ದ ಬಹುಪಾಲು ಪ್ರತಿನಿಧಿಗಳಿದ್ದರು; ಅವರಲ್ಲಿ ಬುದ್ಧಿಜೀವಿಗಳಿದ್ದರು, ದೇಹಶ್ರಮದ ಹಲವಾರು ಕೆಲಸಗಳನ್ನು ಮಾಡುವವರಿದ್ದರು, ಸೇವಾವೃತ್ತಿಯವರಿದ್ದರು, ತಮ್ಮ ಗಂಡಂದಿರ ಕಾಯಕ–ಆಧ್ಯಾತ್ಮಿಕ ಸಾಧನೆಗಳಲ್ಲಿ ಆಸಕ್ತಿಯಿಂದ ಪಾಲ್ಗೊಳ್ಳುತ್ತಿದ್ದ ಸ್ತ್ರೀಯರಿದ್ದರು. ಬಸವಣ್ಣನು ಭವಿಯ ಬಳಿ ನೌಕರನಾಗಿದ್ದರೂ ಅವನು ಜಂಗಮಪ್ರಾಣಿಯಾಗಿದ್ದು ಸದಾ ಶಿವಗೋಷ್ಠಿಯಲ್ಲಿ ನಿರತನಾಗಿ ಸಾಮಾನ್ಯ ಜನತೆಯನ್ನು ತನ್ನೆಡೆಗೆ ಆಕರ್ಷಿಸಿ ತನ್ನ ಸ್ವಂತ ವರ್ಚಸ್ಸಿನಿಂದ ವೀರಶೈವ ಪ್ರಸಾರಕಾರ್ಯದಲ್ಲಿ ಯಾವ ಬಗೆಯಲ್ಲಿ ಕೇಂದ್ರವ್ಯಕ್ತಿಯಾಗಿದ್ದನೆಂಬುದು ಸುಪ್ರಸಿದ್ಧವಾದ ವಿಷಯ. ಹಾಗೆಯೇ ಚೆನ್ನಬಸವ, ಅಲ್ಲಮಪ್ರಭು ಮುಂತಾದವರೂ ಸಹ. ಹಾವಿನಹಾಳ ಕಲ್ಲಯ್ಯನೆಂಬುವನು. ‘‘ವೇದದಿಂ ಶಾಸ್ತ್ರದಿಂ ಗೀತಮಂ ಪಾಡುತಂ, ವಾದದಿಂ ವಿಪ್ರರು ಗೆಲಿದು ನಲಿದಾಡುತುಂ,

ಲೋಕಾಯತರನಲ್ಲಿ ಬೌದ್ಧರಂ ಸೋಲಿಸುತೆ, ಲೋಕದೊಳ್ ಚಾರ್ವಾಕರಂ ಗೆಲೆದು'' ವೀರಶೈವ ಧರ್ಮವು ನೆಲೆಗೊಳ್ಳುವಂತೆ ಪ್ರಸಾರಗೊಳ್ಳುವಂತೆ ತನ್ನ ಬೌದ್ಧಿಕ ಶ್ರಮದಿಂದ ಸಹಾಯ ಮಾಡುತ್ತಿದ್ದನೆಂದು ಹರಿಹರನು ಅವನ ಮೇಲೆ ರಚಿಸಿರುವ ರಗಳೆಯಲ್ಲಿ ಚಿತ್ರಿಸುತ್ತಾನೆ. ವೈದ್ಯಸಂಗಣ್ಣನು ಬಸವಣ್ಣನ ವೈದ್ಯನಾಗಿದ್ದಂತೆ ಕಾಣಿಸುತ್ತದೆ, ಅವನು ತಾನು ಔಷಧ ತಯಾರಿಸುವ ಬಗೆಯನ್ನು ಹೀಗೆ ವರ್ಣಿಸುತ್ತಾನೆ: ‟ಆರು ವರ್ಣದ ಬೇರು, ಮೂರು ವರ್ಣದ ಉದಕ, ರವೆ ತೋರಬಾರದ ಕಲ್ಲು, ವಿಶ್ವಾಸವ ಮೀರಲಾರದ ಗುಂಡು ಇಂತಿವ ಭೇದಿಸಿ ಅರೆಯಲಾಗಿ ಸವೆಯಿತ್ತು, ಮದ್ದು ವಿಶ್ವಾಸವೆಂಬ ಪಟ್ಟೆಯಲ್ಲಿ. ಭಕ್ತಗೆ ಮೂರು, ಮಾಹೇಶ್ವರಂಗೆ ನಾಲ್ಕು, ಪ್ರಸಾದಿಗೆ ಐದು, ಪ್ರಾಣಲಿಂಗಿಗೆ ಆರು, ಶರಣಂಗೆ ಎಂಟು, ಐಕ್ಯಂಗೆ ಹತ್ತು. ಇಂತೀ ಕ್ರಮದಲ್ಲಿ ಕೊಂಡ ಮತ್ತೆ, ಮೂರು ನಾಲ್ಕು ಕೂಡಿ, ನಾಲ್ಕು ಐದು ಕೂಡಿ, ಐದು ಆರು ಕೂಡಿ, ಆರು ಎಂಟು ಕೂಡಿ, ಎಂಟು ಹತ್ತು ಕೂಡಿ, ನಷ್ಟವಾದ ಮತ್ತೆ ರೋಗದ ಕಟ್ಟು ತೊಟ್ಟು ಬಿಟ್ಟಿತ್ತು. ಮರುಳ ಶಂಕರಪ್ರಿಯ ಸಿದ್ಧರಾಮೇಶ್ವರ ಲಿಂಗವ ನರಿಯಲಾಗಿ.'' ಚೌಡಯ್ಯ ಅಂಬಿಗನಾದರೆ, ಮಾಚಯ್ಯ ಮಡಿವಾಳ ಅಥವಾ ಅಗಸ. ಅವನ ಕಾಯಕನಿಷ್ಠೆಯಿಂದ ಶರಣರಲ್ಲಿ ಆತ ಪ್ರಸಿದ್ಧನಾಗಿದ್ದ. ಆತನು ಶರಣರಬಟ್ಟೆಗಳನ್ನು ಒಗೆಯುತ್ತಿದ್ದಂತೆಯೇ ಅವರ ಮನಸ್ಸಿನ ಮೇಲೆಯೂ ಪ್ರಭಾವವನ್ನು ಬೀರಿ ನಿರ್ಮಲಗೊಳಿಸುತ್ತಿದ್ದ, ‟ಅಷ್ಟಕನುವಿನ ಘಟ್ಟಿಯ ಕರಗಿಸಿ, ಕಟ್ಟುಗ್ರದ ಕಾಮಕ್ರೋಧ ಲೋಕ ಮೋಹಮದ ಮತ್ಸರಂಗಳೆಂಬುವ ಸುಟ್ಟುರುಹಿ, ತನುವಿನ ಅವಲೋಕವ ಕೆಡಿಸಿ, ಮನದ ಸಂಚಲವ ನಿಲಿಸಿ,

ಸಕಲ ಕರಣಂಗಳ ಅರಿವಿಂಗಾಹುತಿಯನಿಕ್ಕಿ, ಸುಜ್ಞಾನಪ್ರಭೆಯ ನುಟ್ಟು, ಸುಜ್ಞಾನಪ್ರಭೆಯ ಹೊದೆದು, ಸುಜ್ಞಾನಪ್ರಭೆಯ ಸುತ್ತಿ, ಸುಜ್ಞಾನಪ್ರಭೆಯ ಹಾಸಿ, ಮಹಾಜ್ಞಾನದಲ್ಲಿ ನಿರ್ಭಾವ ಸಂಪನ್ನನಾದ ಮಡಿವಾಳನ ಮಡಿಯ ಪ್ರಸಾದವ ನಾನು ಹೊದೆದ ಕಾರಣ ನಿರ್ಮಳನಾದೆನು, ನಿಜೈಕ್ಯನಾದೆನು, ನಿಶ್ಚಿಂತ ನಾದೆನು.'' ಎಂದು ಅಲ್ಲಮಪ್ರಭುವೇ ಅವನ ಬಗ್ಗೆ ಗೌರವ ವನ್ನು ತೋರಿಸುತ್ತಾನೆ.

ಕನ್ನಪ್ಪ ಎಂಬುವನು ಗಾಳಹಾಕಿ ಮೀನು ಹಿಡಿಯುತ್ತಿದ್ದ ವನು, ಮುದ್ದಯ್ಯನೆಂಬೊಬ್ಬ ವಚನಕಾರನು ರೈತ, ಉಗ್ಗಡಿ ಸುವ ಗುಬ್ಬಿದೇವಯ್ಯನೆಂಬ ವಚನಕಾರನು ಬಸವಣ್ಣನ ಮನೆ ಯನ್ನು ಕಾಯುತ್ತಿದ್ದು, ಅವನನ್ನು ಭೇಟಿಯಾಗಲು ಬಂದವ ರನ್ನು ಯಜಮಾನನ ಸಮಯವನ್ನರಿತು ಒಳಗೆ ಬಿಡುತ್ತಿದ್ದ ಕಾಯಕವನ್ನು ಕೈಗೊಂಡಿದ್ದವನು. ತನ್ನೊಂದು ವಚನದಲ್ಲಿ ಆತ ತನ್ನ ಕಾಯಕವನ್ನು ವರ್ಣಿಸುತ್ತಾನೆ: ‟ಬಹುಜನಂಗಳೆಲ್ಲ ಓಲಗವಿಲ್ಲ ಹೋಗಿ, ಸಲಿಂಗವಂತರಲ್ಲಲ್ಲಿ ನಿಲ್ಲಿ. ಏಕಾಂತ ಸಂಬಂಧರು ಹೋಗಿ, ಲೋಕಾಂತಚಂಡರು ನಿಲ್ಲಿ. ಇಂತೀ ಅವರವರ ಸ್ವಸ್ಥಾನಂಗಳ ಸಲುಗೆಯನರಿದು ಬಿಡುತಿರ್ದೆನು ಕೂಡಲಸಂಗಮದೇವರಲ್ಲಿ ಬಸವಣ್ಣನ ಕಾಲವೇಳೆಯನರಿದು.''

ರಾಮಣ್ಣನೆಂಬೊಬ್ಬನು ದನಕಾಯುವವನು ಎಂದರೆ ತುರುಗಾಹಿ, ಭೀಮಣ್ಣನು ಕಾಮಾಟ ವೃತ್ತಿಯವನು (ಮನೆ ಕಟ್ಟಲು ಬೇಕಾಗುವ ಮರಮುಟ್ಟುಗಳನ್ನು ತಯಾರಿಸುತ್ತಿದ್ದ ವನು),ಬಂಕಣ್ಣನು ಸುಂಕವನ್ನು ವಸೂಲು ಮಾಡುವ ಅಧಿಕಾರಿ ಯಾಗಿದ್ದವನು, ಕನ್ನಡಿಕಾಯಕ ಅಥವಾ ಕ್ಷೌರಿಕವೃತ್ತಿಯ ಅಮುಗೆದೇವಯ್ಯನೆಂಬ ವಚನಕಾರನ ಕಾಯಕ. ತನ್ನೊಂದು

ವಚನದಲ್ಲಿ ಆತನು ತಾನು ಹೇಗೆ ಚನ್ನಬಸವಣ್ಣವೇ ಮುಂತಾದ ಶರಣರ ಸೇವೆಮಾಡಿ ಪುನೀತನಾದೆನೆಂದು ಹೇಳಿಕೊಂಡಿದ್ದಾನೆ: "ಹಿಡಿಯಿಲ್ಲದ ಶಸ್ತ್ರ, ಕೀಲಿಲ್ಲಿದ ಕತ್ತರಿ, ಉಭಯನೊಡ ಗೂಡಿದ ಚಿಮ್ಮುಟ; ರೂಹಿಲ್ಲದ ಚಣ, ಹಲ್ಲಿಲ್ಲದ ಹಣಿಗೆ, ಮಲವಿಲ್ಲದ ಬೆಳಗಿನ ಮುಕುರವ ಹಿಡಿದು ಶರಣರೆಲ್ಲರ ಅಡಿ ವಿಡಿದು ಆಡಬಂದೆ. ಚನ್ನಬಸವಣ್ಣಂಗೆ ಭೃತ್ಯನಾಗಿ, ಶರಣ ಸಂತತಿಗೆ ಲೆಂಕನಾಗಿ, ಸತ್ಯಗುರುಚರಕರ್ತೃ ಸ್ವರೂಪಕ್ಕೆ ಡಿಂಗರಿ ಗರ, ಉಭಯಡಿಂಗರಿಗರ ಕಂದನೆಂದು, ಪ್ರತಿಡಿಂಗರಿಗರ ಕಂದ ನೆಂದು ಪ್ರತಿಪಾಲಿಸಿಕೊ ಬಸವಣ್ಣಪ್ರಿಯ ಕಮಳೇಶ್ವರಲಿಂಗ." ಚಿಕ್ಕದೇವಯ್ಯನೆಂಬ ಶರಣನು ಹಳೆಯ ಲೋಹದ ಸಾಮಾನು ಗಳನ್ನು ಪಡೆದು ಸಾಂಬಾರ ದ್ರವ್ಯಗಳನ್ನು ಮಾರುತ್ತಿದ್ದವನು, ಇದನ್ನಾಗ ಮಲಹರ ಕಾಯಕವೆನ್ನುತ್ತಿದ್ದರು. ಈ ವಿಷಯವು ತುಂಬ ಸ್ವಾರಸ್ಯಕರವಾಗಿದೆ: "ಮುರಿಗಂಚು ತವರ ಹಿತ್ತಾಳೆ ಇವು ಮೊದಲಾದ ಹೋಹವ ತನ್ನಿ. ಕಳ್ಳವಣ ಕಂದುಬೆಳ್ಳಿ ಮೊದಲಾದ ರೊಕ್ಕವ ತನ್ನಿ. ನಿಮಗಲ್ಲದೊಡವೆ ಎನಗೆ; ನಿಮಗೊಳ್ಳಿತಹ ಒಡವೆಯ ಕೊಡುವೆ. ಎನ್ನ ಕಂಬಳಿಯ ಚೀಲವ ಬಿಡುವೆ, ಅದರಲ್ಲಿರ್ದ ಸಂಬಾರದ್ರವ್ಯವ ಕೊಡುವೆ ನೆಂಬುದಕ್ಕೆ ನನ್ನ ನಂಬಿ ಬನ್ನಿ. ಊರ್ಧ್ವರೇತೋಮೂರ್ತಿ ಶ್ವೇತ ಸ್ವಯಂಭು ಕಪಿಲೇಶ್ವಲಿಂಗದಾಣತಿ." ಮಾದಾರ ಧೂಳಯ್ಯನೆಂಬ ವಚನಕಾರನು ಪಾದರಕ್ಷೆಗಳನ್ನು ತಯಾರಿಸಿ ಮಾರುತ್ತಿದ್ದವನು, ಸಂಗಣ್ಣನು ಬೊಕ್ಕಸವನ್ನು ಕಾಯುತ್ತಿದ್ದ ಕಾಯಕದವನು, ನಗೆಯ ಮಾರಿತಂದೆಯು ಜನರನ್ನು ನಗಿಸಿ ಅವರಿತ್ತ ಕಾಣಿಕೆಯಿಂದ ಜೀವಿಸುತ್ತಿದ್ದವನು. ಬಹುರೂಪಿ ಚೌಡಯ್ಯನ ಕಾಯಕವೆಂದರೆ ಹಲವಾರು ರೂಪಗಳನ್ನು ಧರಿಸಿ

ಮನೆಮನೆಯ ಮುಂದೆ ಬಂದು ಕುಣಿದು ಹಣ ಸಂಪಾದಿಸಿ ಜೀವಿಸುತ್ತಿದ್ದುದು : "ಅಪ್ಪಾಬೊಪ್ಪಾಯೆಂಬ ಚಿಕ್ಕ ಚೋಹವುಂ ತೊಟ್ಟು, ಮುಖಕ್ಕೆ ಹೊತ್ತಿಗೊಂದು ಪರಿಯ ಬಚ್ಚಣೆಯನಿಕ್ಕಿ ಮತ್ತದನು ತಲೆಯಲ್ಲಿ ಹೊತ್ತು ತಪ್ಪು ಹೆಜ್ಜೆಯನಿಕ್ಕಿ ಆಡುತಿರ್ದ ರೇಕಣ್ಣಪ್ರಿಯ ನಾಗಿನಾಥನಲ್ಲಿ ಹೊತ್ತು ಹೋಗದ ಬಹುರೂಪವ" ಎಂಬ ತನ್ನ ವಚನದಲ್ಲಿ ಚೌಡಯ್ಯನು ತಾನು ಮುಖವಾಡವನ್ನು ಧರಿಸಿ ಕುಣಿಯುತ್ತಿದ್ದ ಪರಿಯನ್ನು ಹೇಳಿಕೊಂಡಿದ್ದಾನೆ.

ಇಷ್ಟೇ ಅಲ್ಲದೆ ಇನ್ನೂ ಅನೇಕ ಬಗೆಯ ಕಾಯಕಗಳನ್ನು ಅನುಸರಿಸುತ್ತಿದ್ದ ವಚನಕಾರರ ರಚನೆಗಳು ನಮಗೆ ದೊರಕಿವೆ. ಹಲವರು ಸ್ತ್ರೀಯರೂ ಕಾಯಕಗಳನ್ನು ಅವಲಂಬಿಸಿದ್ದರು. ಸೋಮಮ್ಮ ಎಂಬಾಕೆಯು ಕೊಟ್ಟಣವನ್ನು ಕಟ್ಟುವ ಕಾಯಕ ವನ್ನು ನಡೆಸುತ್ತಿದ್ದಳು, ಚಿಮ್ಮವ್ವೆಯು ಕದಿರಿನಿಂದ ನೂಲನ್ನು ತೆಗೆಯುವ ಕಾಯಕದವಳು. ಬಹುಪಾಲು ವಚನಕಾರ್ತಿಯರು ತಮ್ಮ ಗಂಡಂದಿರ ಕಾಯಕದಲ್ಲಿ ನೆರವಾಗಿ ಅವರ ಬಾಳು ಹಸನಾಗಿ ಆಗುವಂತೆ ಮಾಡಿದವರು. ಮೋಳಿಗೆ ಮಹಾದೇವಿ ಯಂತೆ, ಆಯ್ದಕ್ಕಿ ಮಾರಯ್ಯನ ಹೆಂಡತಿ ಲಕ್ಕಮ್ಮನಂತೆ ಕೆಲವರು ತಮ್ಮ ಗಂಡಂದಿರಿಗೇ ಹಲವಾರು ವೇಳೆ ಮಾರ್ಗ ದರ್ಶನ ಮಾಡಬಲ್ಲ ಸ್ವಂತಿಕೆ–ಧೀಮಂತಿಕೆಗಳನ್ನು ಗಳಿಸಿದ್ದರು.

ವಚನಕಾರರು ಕಾಯಕಕ್ಕೆ ನೀಡಿದ ಮಹತ್ವವನ್ನು ಅವರ ಹೆಸರಿಗೆ ಮುಂಚೆ ಬರುವ ವಿಶೇಷಣದಿಂದಲೇ ಅರಿಯಬಹುದು; ಬಹುಪಾಲು ವಚನಕಾರರ ಸ್ವಂತ ಹೆಸರಿನ ಹಿಂದಿರುವ ವಿಶೇಷಣ ಗಳು ಅವರ ಕಾಯಕವನ್ನು ಸೂಚಿಸುತ್ತವೆ. ಎಷ್ಟೋ ವೇಳೆ ವಚನಕಾರರ ಅಂಕಿತ ನಾಮಗಳಿಗಿಂತ ಅವರ ವಿಶೇಷಣಗಳೇ

ಹೆಚ್ಚು ಪ್ರಾಮುಖ್ಯವು ದೊರೆತಿರುವುದನ್ನು ನಾವು ಗಮನಿಸ ಬಹುದು. ಮೋಳಿಗೆ ಮಾರಯ್ಯನು ಮೋಳಿಗಯ್ಯನೆಂದೂ, ಮಡಿವಾಳ ಮಾಚಯ್ಯನು ಮಡಿವಾಳಯ್ಯನೆಂದೂ, ಕಿನ್ನರಿ ಬೊಮ್ಮಯ್ಯನು ಕಿನ್ನರಯ್ಯನೆಂದು ಹೆಸರುವಾಸಿಯಾಗಿದ್ದಾರೆ. ಡಕ್ಕೆಯ ಬೊಮ್ಮಯ್ಯನೆಂಬೊಬ್ಬ ವಚನಕಾರನ ಕಾಯಕವು ಮಾರಿಯನ್ನು ಮೊರದಲ್ಲಿಟ್ಟುಕೊಂಡು ಡಕ್ಕೆಯನ್ನು ಬಾರಿಸುತ್ತ ಮನೆ ಮನೆಯ ಮುಂದೆ ಅದನ್ನು ಕುಣಿಸುತಿದ್ದುದಾಗಿತ್ತು; ಆದರಿಂದ ಅವನ ಸ್ವಂತ ಹೆಸರೇ ಹಿಂದೆ ಬಿದ್ದು ಅವನು ಡಕ್ಕೆಯ ಮಾರಯ್ಯನೆಂದೇ ಪ್ರಸಿದ್ಧನಾಗಿದ್ದಾನೆ. ಘಟ್ಟಿವಾಳಯ್ಯನು ಘಟ್ಟಿವಾಳ ಮುದ್ದಣ್ಣನೆಂದೇ ಕಾಣುತ್ತದೆ; ಇವನ ಕಾಯಕವು ಪರಿಮಳ ದ್ರವ್ಯಗಳನ್ನು ತಯಾರಿಸುವುದು. ಹಾಗೆಯೇ ಮುಖ ವಾಡದಯ್ಯ ಎಂಬುದು ಮುಖವಾಡದ ಕೇಶಿರಾಜನ ಸಂಕ್ಷಿಪ್ತವೂ ಕಾಯಕ ಸೂಚಕವೂ ಆದ ಹೆಸರು. ಕಲಕೇತ ಬ್ರಹ್ಮಯ್ಯನು ವೀರಭದ್ರನ ವೇಷವನ್ನು ಹಾಕಿ ಜನರಿಂದ ಕಾಣಿಕೆಯನ್ನು ಸ್ವೀಕರಿಸಿ ಜೀವಿಸುತ್ತಿದ್ದುದರಿಂದ ಅವನು ಕಲಕೇತಯ್ಯನೆಂದೇ ಪ್ರಸಿದ್ಧನಾದ. ಹೀಗೆ ಸ್ವಂತ ಹೆಸರಿಗಿಂತ ಕಾಯಕಸೂಚಕ ವಿಶೇಷಣವೇ ಪ್ರಮುಖವಾಗಲು ಅನೇಕ ಮಂದಿ ಒಂದೇ ಹೆಸರಿನವರನ್ನು ಗುರುತಿಸಲು ಮಾಡಿಕೊಂಡ ಸುಲಭೋಪಾಯವೂ ಆಗಿರ ಬಹುದಾದರೂ ಪ್ರಾಯಶಃ ಅದರ ಹಿನ್ನಲೆಯಲ್ಲಿ ವಚನಕಾರರು ಕಾಯಕಕ್ಕೆ ನೀಡಿದ ಮಹತ್ವವು ಅಡಕವಾಗಿದೆ.

## ಕಾಯಕ–ಆಧ್ಯಾತ್ಮಿಕ ಅನುಭವ

ಅನೇಕ ವಚನಕಾರರು ತಮ್ಮ ತಮ್ಮ ವಚನಗಳ ಮೂಲಕ ತಮ್ಮ ಅಧ್ಯಾತ್ಮಿಕ ಸಾಧನೆಯನ್ನು ವರ್ಣಿಸುವಾಗ ತಮ್ಮ ಕಾಯಕ ವನ್ನು ವರ್ಣಿಸುವ ರೂಪಕವನ್ನೇ ಬಳಸುತ್ತಾರೆ. ಹೀಗಾಗಿ ಅಂತಹ ವಚನಗಳೆಲ್ಲ ಬೆಡಗಿನ ವಚನಗಳಾಗುತ್ತವೆ. ಸಾಮಾನ್ಯ ವಾಗಿ ಆ ಎಲ್ಲ ವಚನಕಾರರು ಇಂತಹ ಸಂದರ್ಭದಲ್ಲಿ ತಮ್ಮ ಕಾಯಕದ ವಿವರಗಳನ್ನೇ ತಮ್ಮ ಆಧ್ಯಾತ್ಮಿಕ ಅನುಭವ–ತಿಳು ವಳಿಕೆಗಳನ್ನು ವಿವರಿಸುವ ರೀತಿಯಲ್ಲಿಯೇ ಹೊಂದಿಸಿಕೊಂಡಿರು ತ್ತಾರೆ. ಅಂತಹ ವಚನಗಳಿಗೆ ಅರ್ಥವನ್ನು ಹೇಳುವುದು ಬಹು ಕಷ್ಟವಾದ ಕೆಲಸವೇ ಸರಿ. ಕೆಲವು ವ್ಯಾಖ್ಯಾನಕಾರರು ಅಂತಹ ಕೆಲಸವನ್ನು ಮಾಡಿ ನಮಗೆ ಉಪಕಾರಮಾಡಿದ್ದಾರೆ. ನಾವಿಲ್ಲಿ ಕೆಲವು ಉದಾಹರಣೆಗಳನ್ನು ನೋಡಿದಾಗ ಇಂತಹ ವಚನಗಳಲ್ಲಿ ವಚನಕಾರರು ಬಳಸುವ ತಂತ್ರದ ಪರಿಚಯವಾಗುತ್ತದೆ. ಮಾದಾರ ಧೂಳಯ್ಯನ ಕಾಯಕವು ಪಾದರಕ್ಷೆಯ ತಯಾರಿಕೆ, ಅವನ ಒಂದು ವಚನವು ಅವನ ಕಾಯಕವನ್ನು ಈ ರೀತಿ ವರ್ಣಿಸುತ್ತದೆ :

"ಕಟ್ಟಿದೆ ಘಟದಟ್ಟೆಯ ಹೊಲಿದು.
ಇಕ್ಕಿದೆ ಚತುರ್ವಿಧದ ನಾಲ್ಕುಂಗುಟವ ಬಲಿದು,
ಗುಂಟದ ದ್ವಾರದಲ್ಲಿ ಉಭಯ ಸಂಚದ ಬಾರ ತೆಗೆದು,
ತೊಡಕು ಬಂಧವನಿಕ್ಕಿ

ಅಡಿಯು ಬಿಡದಂತೆ ಹಿಂದಣ ಮಡ
ಮುಂದಣ ಉಂಗುಷ್ಟಕ್ಕೆ ಬಂದನೊಂದು ಜಾಱದಂತೆ ಬಂಧಿಸಿ,
ಸಕಲೇಂದ್ರಿಯವೆಂಬ ಉಭಯವ ಸಂಧಿಸಿ ಕುಣಿಕೆಯನಿಕ್ಕಿ,
ಕಾಮದ ಒಡಲ ಮಾದಿಗ ಬಂದೆ ಘಟ ತೋಕುಳು
ತೊಗಲು ಹದಬಂದಿತ್ತು.
ಹೊತ್ತು ಹೋದೀತಣ್ಣಾ, ಮೆಟ್ಟಡಿಯು ಕೊಂಡ ರೊಕ್ಕವ ಕೊಡಿ.
ಒಪ್ಪಿದರಿರಲಿ, ಒಪ್ಪದಿದ್ದಡೆ ಮೂರು ಮುಖದಪ್ಪೆಗೆ ಕೊಟ್ಟೆಹೆ,

ತಪ್ಪಡಿಯ ಮೆಟ್ಟಿ ಹೋಗುತ್ತಿದೇನೆ ಚನ್ನಯ್ಯಪ್ರಿಯ
ಧೂಳನ ಧೂಳಿಗೋಳಿಗಾಗಿ

ಮೇಲುನೋಟಕ್ಕೆ ಈ ವಚನದಲ್ಲಿ ಪಾದರಕ್ಷೆಯ ತಯಾರಿಕೆಯನ್ನು ಸ್ಥೂಲವಾಗಿ ವಿವರಿಸಿರುವಂತೆ ತೋರುತ್ತದೆ. ಆದರೆ ಆಧ್ಯಾತ್ಮಿಕವಾಗಿ ಇದಕ್ಕೆ ಬೇರೆಯೇ ಅರ್ಥವಿದೆ. ಸಿಂಗಳದ ಸಿದ್ಧಬಸವರಾಜ ದೇವರೆಂಬ ವ್ಯಾಖ್ಯಾನಕಾರನು ಈ ವಚನವನ್ನು ವಿವರಿಸಿರುವ ರೀತಿ ಹೀಗಿದೆ: "ಶಿವಜ್ಞಾನೋದಯವಾದ ಶರಣನು ತನುತ್ರಯ ಮುಖ್ಯವಾದ ಸಕಲ ಪ್ರಪಂಚ ನಿವೃತ್ತಿಯ ಮಾಡಿ ಶ್ರೀಗುರುಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧವಾದಲ್ಲಿ ತನ್ನ ಸರ್ವಾಂಗಕ್ಕಾಚಾರವನು ಸ್ವಾನುಭಾವ ಸೂತ್ರದಿಂ ಸಂಬಂಧಿಸಿಕೊಂಡನೆಂಬುದೀಗ, ಕಟ್ಟಿದೆ ಘಟದಟ್ಟೆಯ ಹೊಲಿದು ಎಂಬ ಶಬ್ದಕ್ಕರ್ಥ. ಆ ಚತುರ್ವಿಧದ ಭಕ್ತಿಯನೊಳಕೊಂಡಿರ್ಪ ಸದ್ವಿವೇಕದ್ವಾರದಲ್ಲಿ ಮೀರಿದ ಶ್ರೀ ಮಾನ ಕ್ರಿಯಾಚಾರವ ಸಂಬಂಧಿಸಿದನೆಂಬುದೀಗ, ಉಂಗುಟದ ದ್ವಾರದಲ್ಲಿ ಉಭಯಂ ಸಂಚದ ಬಾರ ತೆಗೆದು ಎಂಬ ಶಬ್ದಕರ್ಥ. ಆ ಸ್ಥಲಂಗಳಲ್ಲಿ ಗುರುಮಾರ್ಗಾಚಾರ ಅಭಿನ್ನವಾಯಿತ್ತೆಂಬುದೀಗ, ಅಡಿಯು ಬಿಡದಂತೆ ಎಂಬ ಶಬ್ದಕರ್ಥ. ಆ ಗುರುಮಾರ್ಗಾಚಾರವಾವ

ರಿಸದಂತೆ ಮೂಲಜ್ಞಾನವನಾಚಾರದಲ್ಲಿ ಸಂಬಂಧಿಸಿದ ಆ ಆಚಾರ ವನು ಮೂಲಜ್ಞಾನವನು ಸಂಬಂಧಿಸಿ ಅಂತಪ್ಪ ಜ್ಞಾನಕ್ರೀ ನಿರ್ಧಾರವಾಗಿ ತೊಲಗದಂತೆ ಎಂಬದೀಗ, ಹಿಂದಣ ಮಡ ಮುಂದಣ ಉಂಗುಷ್ಟಕ್ಕೆ ಒಂದನೊಂದು ಜಾಳಿದಂತೆ ಬಂಧಿಸಿ ಎಂಬ ಶಬ್ದಕರ್ಥ. ಅಂತಪ್ಪ ಜ್ಞಾನಕ್ರೀ ನಿರ್ಧಾರವಾದ ಶರಣನು ಬಹಿಃಕರಣಂಗಳೆಲ್ಲವನು ಕ್ರಿಯಾಚಾರದಲ್ಲಿ ಅಂತಃಕರ ಣಂಗಳೆಲ್ಲವನು ಅರಿವಿನಲ್ಲಿ ಸಮರಸವ ಮಾಡಿ ಉಭಯವು ಹಿಂಗ ದಂತೆ ಪರಿಪೂರ್ಣಜ್ಞಾನವೆಂಬ ಕುಣಿಕೆಯುನಿಕ್ಕಿದೆನೆಂಬುದೀಗ, ಸಕಲೇಂದ್ರಿಯುವೆಂಬ ಉಭಯುವ ಸಂಧಿಸಿ ಕುಣಿಕೆಯುನಿಕ್ಕಿ ಎಂಬ ಶಬ್ದಕ್ಕರ್ಥ. ಈ ಉಭಯಕರಣಂಗಳ ಮಹಾಜ್ಞಾನದಲ್ಲಿ ಸಂಬಂಧಿಸಿದ ಶರಣ ಶಿವಾಪೇಕ್ಷೆಯು ಮುಂದುಗೊಂಡು ಸತ್ಕ್ರೀ ಯಿಂದಾಚರಿಸುತಿರ್ದನೆಂಬುದೀಗ, ಕಾಮದ ಒಡಲ ಮಾದಿಗ ಬಂದನೆಂಬ ಶಬ್ದಕರ್ಥ. ಆ ಪರಮಾನಂದ ಜಲದಲ್ಲಿ ಸಮರಸ ವಾದ ಶರಣನು ವೃಥಾ ದಿನಕಾಲಂಗಳು ಸವೆದು ಹೋಗದಂತೆ ತ್ರಿವಿಧಭಕ್ತಿಗಳ ನಾಡಿ ಎಂಬುದೀಗ, ಹೊತ್ತು ಹೋದಿತಣ್ಣ ಎಂಬ ಶಬ್ದಕ್ಕರ್ಥ. ಗುರುಸ್ವರೂಪನಾದ ಶರಣನು ಮೋಕ್ಷಾಪೇಕ್ಷರಾಗಿ ಬಂದ ಭಕ್ತಜನಂಗಳ ಅಂಗಕ್ಕೆ ಅಭಿನ್ನ ಕ್ರಿಯಾಚಾರವ ಸಂಬಂಧವ ಮಾಡಿ ತನುಮನಧನಂಗಳನು ಗುರುಲಿಂಗಜಂಗಮಕ್ಕೆ ನಿವೇದಿಸಿಯೆಂದು ಬೋಧಿಸುತ್ತಿರ್ದ ನೆಂಬುದೀಗ, ಮೆಟ್ಟಡಿಯು ಕೊಂಡ ರೊಕ್ಕವ ಕೊಡಿ ಎಂಬ ಶಬ್ದಕ್ಕರ್ಥ. ಅಭಿನ್ನ ಕ್ರಿಯಾಚಾರವನು ವಿಶ್ವಾಸದಿಂ ಗ್ರಹಿಸಿ ವಿಶ್ವಾಸಹೀನನಾಗಿ ಅನುಸರಣೆಯಾದೊಡೆ ಬೇಡವೆಂಬುದೀಗ, ಒಪ್ಪಿದಡಿರಲಿ ಒಪ್ಪದಿರ್ದಡೆಯೆಂಬ ಶಬ್ದಕ್ಕರ್ಥ. ಆ ಅಭಿನ್ನ ಕ್ರಿಯಾಚಾರವ ತ್ರಿವಿಧಲಿಂಗವನೊಳಕೊಂಡಿರ್ಪ ಪರಶಿವ ತತ್ವ

ದಲ್ಲಿ ಸಂಬಂಧವ ಮಾಡಿದನೆಂಬುದೀಗ, ಮಊರು ಮುಖದಪ್ಪೆ ಗೊಟ್ಟಿಹನೆಂಬ ಶಬ್ದಕ್ಕರ್ಥ. ಆ ಶರಣ ಭಿನ್ನ ಕ್ರಿಯಾಚಾರವ ಧ್ವಂಸವ ಮಾಡಿ ಅಭಿನ್ನ ಕ್ರಿಯಾಚಾರವಿಡಿದೆಯುದ್ಧತ್ತಿರ್ದನೆಂಬು ದೀಗ, ತಪ್ಪಡಿಯ ಮೆಟ್ಟಿ ಹೋಗುತ್ತಿದ್ದೇನೆ ಚನ್ನಯ್ಯಪ್ರಿಯ ಧೂಳನ ಧೂಳಿಗೊಳಗಾಗಿ ಎಂಬ ಶಬ್ದಕ್ಕರ್ಥ". ಈ ವ್ಯಾಖ್ಯಾನದ ಒಟ್ಟು ತಾತ್ಪರ್ಯವನ್ನು ಈ ರೀತಿ ಸಂಗ್ರಹಿಸ ಬಹುದು: ಶಿವಜ್ಞಾನವನ್ನು ಪಡೆದ ಶರಣನು ಪ್ರಾಪಂಚಿಕ ವಾದುದನ್ನೆಲ್ಲ ತೊರೆದು ತನ್ನ ಅರಿವು-ಅನುಭವಗಳಿಗನುಗುಣ ವಾದ ಆಚಾರವನ್ನು ಪಾಲಿಸಲು ತೊಡಗುತ್ತಾನೆ, ಇದರೊಡನೆ ಚತುರ್ವಿಧ ಭಕ್ತಿ (ಮಂತ್ರ, ಧ್ಯಾನ್ಯ, ಜಪ, ಸ್ತೋತ್ರ)ಯಿಂದ ಕೂಡಿ ಗುರುವು ಬೋಧಿಸಿರುವ ಆಚಾರ ಹಾಗೂ ತನ್ನ ನಡತೆ ಗಳು ಒಂದೇ ರೀತಿಯಲ್ಲಿರುವಂತೆ ಮಾಡುತ್ತಾನೆ: ಎಂದರೆ ಅವನ ಆಚಾರವು ಗುರುವಿನ ಉಪದೇಶಕ್ಕನುಗುಣವಾಗಿರುತ್ತದೆ. ಆಗ ಅವನ ಭೌತಿಕ ದೇಹವು ಕ್ರಿಯಾಚಾರದಲ್ಲಿ ತೊಡಗಿದ್ದರೆ, ಅಂತಃಕರಣ ಅರಿವಿನಿಂದ ಕೂಡಿರುತ್ತದೆ, ಇದೇ ಪರಿಪೂರ್ಣ ಜ್ಞಾನ ಎನಿಸಿಕೊಳ್ಳುವುದು. ಇಂತಹವನ ನಡವಳಿಕೆಯು ಶಿವಾಪೇಕ್ಷೆಯಿಂದ ಕೂಡಿರುವಂತಹುದು. ಭಕ್ತನು ತ್ರಿವಿಧ ಎಂದರೆ ಗುರುಲಿಂಗಜಂಗಮಗಳ ಬಗ್ಗೆ ಭಕ್ತಿಯಿಂದ ಕೂಡಿ ತನ್ನ ತನುಮನಧನಗಳನ್ನು ಅವುಗಳಿಗೆ ಸಮರ್ಪಿಸುತ್ತಾನೆ; ಇಂತಹ ಆಚಾರವು ಅರಿವಿಗನುಗುಣವಾಗಿರಬೇಕು ಅಥವಾ ಮನಃ ಪೂರ್ವಕವಾಗಿರಬೇಕು, ಇಲ್ಲದಿದ್ದರೆ ಅಂತಹ ಆಚಾರವು ವ್ಯರ್ಥ ವೆಂದು ಆತ ಬೋಧಿಸುತ್ತಾನೆ. ಈ ರೀತಿಯಲ್ಲಿ ತನ್ನ ತಿಳುವಳಿಕೆ ಹಾಗೂ ನಡತೆಗಳಲ್ಲಿ ವ್ಯತ್ಯಾಸವಿಲ್ಲದಂತೆ ಭಕ್ತನು ಬಾಳುತ್ತಾನೆ.

ಕಲಕೇತ ಬೊಮ್ಮಯ್ಯನೆಂಬ ವಚನಕಾರನ ಕಾಯಕವು ಕಲಕೇತ ವೃತ್ತಿ. ಈ ವೃತ್ತಿಯು ಒಂದು ಬಗೆಯ ಯಾಚಕ ವೃತ್ತಿಯೆಂಬುದಾಗಿ ತಿಳಿಯುತ್ತದೆ. ಬಸವ ಪುರಾಣದಲ್ಲಿ ಕಲಕೇತ ವೇಷಧಾರಿಯು ಧರಿಸುವ ವೇಷಭೂಷಣಗಳನ್ನು ಈ ರೀತಿಯಾಗಿ ವರ್ಣಿಸಲಾಗಿದೆ :

"ಮುಂದಲೆಯ ಮುಡಿ ನಡುಗೆ ಭಸಿತವ
ನೊಂದಿ ಲಳಿಕದೊಳಿಟ್ಟು ಕವಿಯಲಿ
ಕೆಂದಳಿರನಳವಡಿಸಿ ಕಾಗಿನ ಕಪ್ಪಡವನುಟ್ಟು ।
ಅಂದುಗೆಯನೆಡದಡಿಯೊಳಡರಿಚಿ
ಒಂದು ಕಾಲಿಗೆ ಗೆಜ್ಜೆಯಂ ಬಿಗಿ
ದಂದದಿಂದೊಲೆದೊಲೆದು ನಡೆವುತ ಗಹಗಹಿಸಿ ನಗುತ ॥

ಛುಲಿಕೆ ಛುಲಿಲೆಂದುಲಿಯೆ ದಕ್ಷನ
ತಲೆಯ ಕೋಡಿನ ತೆರದಿ ತಗರಿನ
ಬಲಿದ ಕೊಂಬಂ ತನ್ನೆಡದ ಕೈಯಲಿ ಹಿಡಿದುಕೊಂಡು ।
ಬಲೆಹರಣಕಾರಣಕವತರಿಸಿ
ಬೆಳೆದವನ ನೆಟ್ಟೆಲುವಿನಂದದಿ
ಬೆಳುಗುದಿಗೆಯಂ ಬಲದ ಕರದಲಿ ಹಿಡಿದು ತಿರುವುತ್ತ ॥

ಕಲಕೇತ ವೇಷವನ್ನು ಧರಿಸಿ ಶಿವಭಕ್ತರ ಮನೆಯ ಮುಂದೆ ಬಂದು ಕುಣಿದು ಭಕ್ತರನ್ನು ನಗಿಸಿ ಅವರಿತ್ತ ಧಾನ್ಯದಿಂದ ಜಂಗಮ ದಾಸೋಹ ಮಾಡುತ್ತಿದ್ದನಂತೆ. ಈ ವಿವರಣೆಯನ್ನು ನೋಡಿದರೆ ಕಲಕೇತ ವೇಷವೆಂದರೆ ದಕ್ಷನ ಯಾಗವನ್ನು ಧ್ವಂಸ ಮಾಡಿದ ವೀರಭದ್ರನ ವೇಷವೆಂಬುದು ತಿಳಿಯುತ್ತದೆ (ಆದರೆ ಕಲಕೇತವೆಂಬ ಮಾತು ವೀರಭದ್ರನಿಗೆ ಯಾವ ರೀತಿ ಅನ್ವಯಿಸುತ್ತದೆಯೋ ಹೇಳುವುದು ಕಷ್ಟ).

ಕಲಕೇತಯ್ಯನ ಒಂದು ವಚನವು ತಾನು ದಕ್ಷಯಜ್ಞವನ್ನು ಧ್ವಂಸಮಾಡಿದ ಕಾಲದ ವೀರಭದ್ರನಂತೆಯೋ ಟಗರಿನ ಮುಖವನ್ನು ಧರಿಸಿ ಕುಣಿಯುತ್ತಿದ್ದುದನ್ನು ಸಮರ್ಥಿಸುತ್ತದೆ. ಆ ವಚನವು ಈ ರೀತಿಯಾಗಿದೆ :

"ಕಾಲ ನಾಲ್ಕು ಮುರಿದು ಕೋಡೆರಡೆನಿಸಿತ್ತು
ಆರಡಗಿತ್ತು ಟಗರಿನ ಹಣೆಯಲ್ಲಿ
ಮೂರು ಹೋಯಿತ್ತು ಕೋಡೆರಡರಲ್ಲಿ
ಎಂಟು ಹೋಯಿತ್ತು ಕಾಲು ನಾಲ್ಕರಲ್ಲಿ
ಟಗರಿನ ಜೀವ ಉಭಯ ಸನ್ನೆಯಲ್ಲಿ ಹೋಯಿತ್ತು
ಇಂತು ಕಲಕೇತ ವಿದ್ಯವ ಧರಿಸಿ
ಮಹಾಶರಣರ ಮನದ ಮಂದಿರದಲ್ಲಿ ಕಲಕೇತನ ಒಲವರದಲ್ಲಿ
ಮೂಡಿ ಮುಳುಗಬೇಡಾ ಎಂದು ಸಾರಿ ಮಾರಬಂದೆ,
ಶುದ್ಧ ಪ್ರಸಾದವೆನಗುಂಟು, ಸಿದ್ಧ ಪ್ರಸಾದವೆನಗುಂಟು,
ಪ್ರಸಿದ್ಧ ಪ್ರಸಾದ ನಿಮಗುಂಟು
ಆ ಪ್ರಸನ್ನ ಪ್ರಸಾದವೆನಗೆ ಬೇಕೆಂದು
ಮೇಕಲೇಶ್ವರಲಿಂಗವನೊಡಗೂಡಿಕೊಂಡು ಬೇಡ ಬಂದೆ".

ಈ ವಚನದಲ್ಲಿನ ವಿವರಗಳನ್ನು ಆವನ ಕಾಯಕವನ್ನು ವಿವರಿಸುವ ಕಾರಣದಿಂದ ಹೇಳಿಲ್ಲ. ಹಾಗೆ ತನ್ನ ಕಾಯಕದ ವಿವರಗಳನ್ನಷ್ಟೇ ನೀಡುವುದು ವಚನಕಾರನ ಉದ್ದೇಶವಾಗಿದ್ದರೆ ಸಾಧಾರಣ ಭಾಷೆಯೇ ಸಾಕಾಗುತ್ತಿತ್ತು, ಈ ಬಗೆಯ ಬೆಡಗಿನ ಶೈಲಿಯು ಬೇಕಾಗಿರಲಿಲ್ಲ. ಈ ವಚನದ ಮೂಲಕ ಕಲಕೇತಯ್ಯನು ತನ್ನ ಆಧ್ಯಾತ್ಮಿಕ ಅರಿವನ್ನೂ ವಿವರಿಸುತ್ತಿದ್ದಾನೆ. ಈ ವಚನಕ್ಕೆ ಸಿಂಗಳದ ಸಿದ್ಧಬಸವರಾಜನು ಬರೆದ ವ್ಯಾಖ್ಯಾನವಿದು:

"ಸುಜ್ಞಾನೋದಯವಾದ ಶರಣನು ಮನ ಬುದ್ಧಿ ಚಿತ್ತ ಅಹಂಕಾರವೆಂಬ ಚತುಃಕರಣಗಳನು ಸದ್ಭಾವಹಸ್ತದಿಂ ನಿವೃತ್ತಿ ಮಾಡಿದನೆಂಬುದೀಗ, ಕಾಲ ನಾಲ್ಕು ಮುರಿದು ಎಂಬ ಶಬ್ದಕ್ಕರ್ಥ.

ಅಂತು ಚತುಃಕರಣಗಳು ನಷ್ಟವಾದಲ್ಲಿ ಜೀವನ ಅಹಂಕಾರ–ಮಮಕಾರವೆಂಬ ಕೋಡು ಭಗ್ನವ ಮಾಡಿದನೆಂಬುದೀಗ, ಕೋಡೆರಡು ಕಿತ್ತು ಎಂಬ ಶಬ್ದಕ್ಕರ್ಥ. ಟಗರೆಂದೆಡೆ ಸಜ್ಜೀವನು, ಹಣೆಯೆಂದೊಡೆ ಶಿವಾದ್ವೈತ ಭಕ್ತಿ, ಭಕ್ತಿಯಿಂ ಷಡೇಂದ್ರಿಯಂಗಳ ವರ್ತನೆ ನಿವೃತ್ತಿಯಾಯಿತೆಂಬುದೀಗ, ಆರಡಗಿತ್ತು ಟಗರಿನ ಹಣೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತು ಅಹಂಕಾರ–ಮಮಕಾರಂಗಳೊಡನೆ ತನುತ್ರಯಂಗಳು ನಿವೃತ್ತಿಯಾದವೆಂಬುದೀಗ, ಮೂರುಹೋಯಿತ್ತು ಕೋಡೆರಡರಲ್ಲಿ ಎಂಬ ಶಬ್ದಕ್ಕರ್ಥ. ಅಂತು ಸುವಿಜ್ಞಾನ ಸನ್ನಿಹಿತವಾದ ಶರಣನ ಚತುಃಕರಣಂಗಳಳಿದ ಕೋಡೇ ಅಷ್ಟಮದಂಗಳು ನಷ್ಟವಾದವೆಂಬುದೀಗ, ಎಂಟು ಹೋಯಿತ್ತು ಕಾಲು ನಾಲ್ಕರಲ್ಲಿ ಎಂಬ ಶಬ್ದಕ್ಕರ್ಥ. ಗುರು–ಕಾರುಣ್ಯದಿಂದ ಲಿಂಗಾಂಗ ಸಂಬಂಧಿಯಾದ ಶರಣನು ಜ್ಞಾನ ಕ್ರೀಯಿಂ ಮಥನಿಸುತ್ತಿರಲು ಜೀವನ ಜೀವಭಾವ ನಿವೃತ್ತಿಯಾಯಿತ್ತೆಂಬುದೀಗ, ಟಗರಿನ ಜೀವ ಉಭಯ ಸನ್ನೆಯಲ್ಲಿ ಹೋಯಿತ್ತು ಎಂಬ ಶಬ್ದಕ್ಕರ್ಥ. ಅಂತು ಶಿವ ಜ್ಞಾನ ಪ್ರಕಾಶವಾಗಿ ಶರಣನ ನಿಜಾನುಭಾವಾಂತರಂಗದಲ್ಲಿ ಸುಜ್ಞಾನ ಸಮರಸ ಬೋಧೆಯಲ್ಲಿರ್ಪನೆಂಬುದೀಗ, ಇಂತೀ ಕಲಕೇತನ ವಿದ್ಯವ ಧರಿಸಿ ಮಹಾಶರಣರ ಮನದ ಮಂದಿರದಲ್ಲಿ ಎಂಬ ಶಬ್ದಕ್ಕರ್ಥ. ಪರಶಿವನು ಕೊಡುವ ಖಂಡಿತ ಫಲಪದಂಗಳ ಬಯಸಬೇಡಾ ಎಂದು ಚಿತ್‌ಸ್ವರೂಪನಾದ ಶರಣ ಸುಜ್ಞಾನಬೋಧೆಯ ಬೋಧಿಸುತ್ತಿರ್ದನೆಂಬುದೀಗ ಕಲಕೇತನ ಒಲವರದಲ್ಲಿ ಮೂಡಿ ಮುಳುಗುಬೇಡಾ ಎಂದು ಸಾರಿ ಮಾರಬಂದೆ ಎಂಬ ಶಬ್ದಕ್ಕರ್ಥ. ಸೂದ್ರಪನಾದ ಗುರುವಿಂಗೆ ರೂಪು ಅರ್ಪಿತವಾದಲ್ಲಿ ಶುದ್ಧಪ್ರಸಾದ ಚಿದ್ರೂಪನಾದ ಲಿಂಗಕ್ಕೆ ರುಚಿ

ಅರ್ಪಿತವಾದಲ್ಲಿ ಸಿದ್ಧಪ್ರಸಾದ ಈ ಉಭಯ ಪ್ರಸಾದವ ಶರಣ ಚಿದ್ವಾರದಿಂ ಸ್ವೀಕರಿಸುತ್ತಿರ್ದನೆಂಬುದೀಗ, ಶುದ್ಧಪ್ರಸಾದ ವೆನಗುಂಟು ಎಂಬ ಶಬ್ದಕ್ಕರ್ಥ. ಷಟುಸ್ಥಲ ಬ್ರಹ್ಮಿಗಳಾದ ವೀರ ಮಾಹೇಶ್ವರರು ಆನಂದ ಸ್ವರೂಪನಾದ ಸುಜ್ಞಾನ ಜಂಗಮ ಲಿಂಗಕ್ಕೆ ಪರಿಣಾಮ ಪ್ರಸಾದವನರ್ಪಿಸಿ ಆ ಜಂಗಮ ಲಿಂಗದಿಂದ ಉದಯವಾದ ಪ್ರಸಿದ್ಧ ಪ್ರಸಾದವ ಚಿದ್ವಾರದಿಂ ಸ್ವೀಕರಿಸುತ್ತಿಹರೆಂಬುದೀಗ, ಪ್ರಸಿದ್ಧ ಪ್ರಸಾದ ನಿಮಗುಂಟು ಎಂಬ ಶಬ್ದಕ್ಕರ್ಥ. ಆ ನಿರ್ಮಲ ಸ್ವರೂಪವಾದ ಪ್ರಸನ್ನ ಪ್ರಸಾದವ ಸತ್ಪಥಮಾರ್ಗವಿಡಿದು ಸಾಧಿಸಬೇಕಾಗಿ ಶರಣ ಲಿಂಗ ದಲ್ಲಿ ಜ್ಞಾನಕ್ರಿಯಾಚಾರವನೆ ಪಿಡಿದೆಯ್ದುತ್ತಿರ್ದನೆಂಬುದೀಗ, ಪ್ರಸನ್ನ ಪ್ರಸಾದವೆನಗೆಬೇಕೆಂದು ಮೋಕಲೇಶ್ವರಲಿಂಗವನೊಡ ಗೊಂಡು ಬೇಡಬಂದೆನೆಂಬ ಶಬ್ದಕ್ಕರ್ಥ."

ಈ ವ್ಯಾಖ್ಯಾನದ ಸಾರವನ್ನು ನಾವೀ ರೀತಿ ಸಂಗ್ರಹಿಸ ಬಹುದೆನ್ನಿಸುತ್ತದೆ: ಶಿವಜ್ಞಾನವನ್ನು ಪಡೆದ ಶರಣನು ಮನ-ಬುದ್ಧಿ-ಚಿತ್ತ-ಅಹಂಕಾರಗಳೆಂಬ ಚತುಃಕರಣಗಳಿಂದ ಮುಕ್ತನಾಗಿ ಅಹಂಕಾರ–ಮಮಕಾರಗಳನ್ನು ಮೀರಿರುತ್ತಾನೆ. ಆ ಭಕ್ತನ ಜೀವವು ಶಿವನೊಡನೆ ಪಡೆದಿರುವ ಅದ್ವೈತ ಭಕ್ತಿಯಿಂದಾಗಿ ಅವನ ಇಂದ್ರಿಯವಾಂಛೆಯು ನಾಶವಾಗುತ್ತದೆ. ಹೀಗೆ ಸುಜ್ಞಾನವನ್ನು ಪಡೆದ ಶರಣನ ಅಷ್ಟಮದಗಳು (ಕುಲ, ಛಲ, ಧನ, ರೂಪ, ಯೌವನ, ವಿದ್ಯೆ, ರಾಜ್ಯ, ತಪಸ್ಸುಗಳಿಂದಾದ ಎಂಟು ಬಗೆಯ ಮದಗಳು) ಇಲ್ಲವಾಗುತ್ತವೆ. ಗುರುಕರುಣೆ ಯಿಂದ ಲಿಂಗಾಂಗ ಸಂಬಂಧವನ್ನು ಪಡೆದ ಈ ಶರಣನಲ್ಲಿ ಆ ಕಾರಣದಿಂದ, ಜೀವ–ಭಾವಗಳ ವ್ಯತ್ಯಾಸವು ಹೋಗಿ ಅದ್ವೈತ ಭಾವವುಂಟಾಗುತ್ತದೆ, ಇದರಿಂದ ಅವನಲ್ಲಿ ಲಿಂಗಾಂಗ ಸಾಮ

ರಸ್ಯವೇರ್ಪಡುತ್ತದೆ. ಇಂತಹ ಶರಣನಿಗೆ ದೇವರೀಯುವ ನಶ್ವರಫಲಗಳ ಮೇಲೆ ಆಸೆಯಿರದೆ ಅವನಿಗೆ ಶಿವಜ್ಞಾನವೇ ಗುರಿಯಾಗಿರುತ್ತದೆ. ಷಟ್‌ಸ್ಥಲಮಾರ್ಗದಲ್ಲಿ ನಡೆಯುವವನಿಗೆ ಗುರುಲಿಂಗ ಜಂಗಮುಗಳಿಗೆ ಅರ್ಪಿತವಾದ ಶುದ್ಧಪ್ರಸಾದ ಸಿದ್ಧಪ್ರಸಾದ ಪ್ರಸಿದ್ಧ ಪ್ರಸಾದಗಳನ್ನು ಪಡೆಯುತ್ತಾನೆ. ಪ್ರಸನ್ನ ಪ್ರಸಾದವನ್ನು ಸನ್ಮಾರ್ಗದಿಂದ ಸಾಧಿಸಬೇಕೆಂದು ತಿಳಿದ ಆ ಶರಣನು ಜ್ಞಾನ–ಆಚಾರಗಳೆಡರಡರಲ್ಲಿ ಅಭಿನ್ನತೆ ಯುನ್ನು ಸಾಧಿಸಿ ಬಾಳುತ್ತಾನೆ.

ಈ ರೀತಿ ಅನೇಕ ವಚನಕಾರರು ತಮ್ಮ ತಮ್ಮ ಕಾಯಕ ಗಳನ್ನು ವರ್ಣಿಸುವುದರ ಮೂಲಕವೇ ತಮ್ಮ ಆಧ್ಯಾತ್ಮಿಕ ಸಿದ್ಧಿ ಜ್ಞಾನಗಳನ್ನು ವಿವರಿಸುತ್ತಾನೆ. ಇದು ವಚನಕಾರರು ಬೋಧಿ ಸಿದ ತತ್ವಕ್ಕೆ ಅನುಗುಣವಾದುದೇ ಆಗಿದೆ. ವ್ಯಕ್ತಿಯ ವೃತ್ತಿಯೇ ಆಧ್ಯಾತ್ಮಿಕ ಸಾಧನೆಯ ಮಾರ್ಗವಾಗಬೇಕೆಂದು ಬೋಧಿಸುವು ದರ ಜೊತೆಗೆ ಅವರಲ್ಲಿ ಹಲವರು ಅದರಂತೆಯೇ ನಡೆದರು. ಆ ರೀತಿ ವೃತ್ತಿ–ಆತ್ಮಸಿದ್ಧಿಗಳನ್ನು ಮೇಳೈಸುವುದರ ಕಲ್ಪನೆಯುನ್ನು ಕಾಯಕ ವಿವರಣೆಯ ರೀತಿಯಾಗಿ ಆಧ್ಯಾತ್ಮಿಕ ಅನುಭವವನ್ನು ಹೇಳುವ ತಂತ್ರದ ಮೂಲಕ ತುಂಬ ಉಚಿತವಾದ ರೀತಿಯಲ್ಲಿ ಅವರು ನಿರೂಪಿಸುತ್ತಾರೆ. ಪ್ರಾಚೀನ ವಚನಸಂಕಲನಕಾರ ನೊಬ್ಬನು ವಚನಗಳನ್ನು ವಚನಕಾರರು "ನಡೆದು ನುಡಿದ ವಚನ"ಗಳೆಂದು ವಿವರಿಸುತ್ತಾನೆ. ಈ ಮಾತು ಶರಣರ ಕಾಯಕ ವಿವರಣೆಯ ವಚನಗಳಿಗೆ ಮತ್ತಷ್ಟು ಸುಂದರವಾಗಿ ಅನ್ವಯಿಸುತ್ತದೆ. ದೇಹವು ವೃತ್ತಿಯಲ್ಲಿ ನಿರತವಾಗಿದ್ದರೆ ಅಂತ ರಂಗವು ಅದು ಸಂಕೇತಿಸುವ ಆತ್ಮಸಾಧನೆಯಲ್ಲಿ ತೊಡಗಿರುವುದೇ ಕಾಯಕದ ಆದರ್ಶಸ್ಥಿತಿ. ಹರಿಹರನು ತನ್ನ 'ಕುಂಬರ ಗುಂಡ

ಯ್ಯನ ರಗಳೆ'ಯಲ್ಲಿ ಗುಂಡಯ್ಯನು ಮಡಕೆಗಳನ್ನು ಮಾಡುತ್ತಿದ್ದುದನ್ನು ಆತನ ಮನಸ್ಸು ತೊಡಗಿದ್ದ ಯೌಗಿಕ ಸಾಧನೆಗೆ ಸಂಕೇತವೆಂಬುವಂತೆ ವರ್ಣಿಸುತ್ತಾನೆ :

"ಆಧಾರಮೆಯಾಧಾರಮುದಾಗಿರೆ
ವೇಧೆಯು ಚಕ್ರದ ಮೊಳೆ ತಾನಾಗಿರೆ
ಮಿಗೆ ಷಟ್‌ಚಕ್ರಮೆ ಚಕ್ರಮುದಾಗಿರೆ
ಸೊಗಯಿಪ ನಾಭಿಯೆ ನಾಭಿಯುದಾಗಿರೆ
ಕನಸಿನ ಕಾಯಂ ಮೃತ್ತಿಕೆಯಾಗಿರೆ
ನೆನಹೇ ಚಟದಾರಂಗಳವಾಗಿರೆ
ನಿಷ್ಠೆಯೆ ತಿರುಹುವ ದಂಡವದಾಗಿರೆ
ಮುಟ್ಟಿ ತಿರುಗುವುದು ಜೀವವದಾಗಿರೆ
ಮಾಡುವ ಭಕ್ತಿ ಕಟಾಹಮುದಾಗಲು
ಕೂಡಿದ ಕರಣದೆ ಮರ್ದಿಸುತಾಗಲು
ಮಿಗೆ ಶೋಷಣದಾತಪದಿಂದಾರಿಸಿ
ಮಿಗೆ ಮಿಗಿಲುದರಾಗ್ನಿಗಳಿಂ ದಾಹಿಸಿ
ಆನಂದಜಲಂ ಪಾವನಮಾಗಲು
ನಾನಾಭಕ್ತಿ ಕಟಾಹಮುದಾಗಲು
ಶಿವಕಾರುಣ್ಯಾಂಬುಗಳಂ ತೀವುತೆ
ಶಿವಭಕ್ತರ್ಗಾನಂದದೊಳೀವುತೆ
ಇಂತೊಳಗಣ ಘಟಕಾಯಕವೊಪ್ಪಲು
ಸಂತತ ಹೊರಗಣ ಮಾಟಮುದೊಪ್ಪಲು"

ಗುಂಡಯ್ಯನು ಮಡಕೆಗಳನ್ನು ತಯಾರಿಸುತ್ತಿದ್ದನಂತೆ. ಈ ಬಗೆಯ ವರ್ಣನೆಗೆ ಹರಿಹರನಿಗೆ ವಚನಕಾರರ ಕಾಯಕಸೂಚಕ ವಚನಗಳೇ ಮಾದರಿಯಾದವೆಂದು ತೋರುತ್ತದೆ. ಅದೇನೇ ಇರಲಿ, ಕಾಯಕವು ಶಿವಶರಣರಿಗೆ ಜೀವನದ ಅತ್ಯಂತ ಮೂಲಭೂತವೂ ಮಹತ್ವಪೂರ್ಣವೂ ಆದ ವಿಷಯವಾಗಿದ್ದಿತೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

## ಕಾಯಕ ತತ್ವ : ಮುಖ್ಯಾಂಶಗಳು

---

ಇದುವರೆಗಿನ ನಮ್ಮ ವಿವರಣೆಯಿಂದ ಶರಣರು ನೀಡಿದ ಕಾಯಕತತ್ವದ ಮುಖ್ಯಾಂಶಗಳನ್ನು ಈ ರೀತಿಯಾಗಿ ಸಂಗ್ರಹಿಸಿ ಕೊಡಬಹುದೆನಿಸುತ್ತದೆ : 1. ಸೋಮಾರಿತನದಿಂದ ಜೀವಿಸುವುದಾಗಲೀ, ಪರಪೀಡನೆಯಿಂದ ಹಣ ಸಂಪಾದನೆ ಮಾಡುವುದಾಗಲೀ ಭಿಕ್ಷೆಬೇಡಿ ಜೀವನನಿರ್ವಹಣೆ ಮಾಡುವುದಾಗಲೀ ತುಂಬ ಹೇಯಂಕರವಾದುದು ; ಆದುದರಿಂದ ಪ್ರತಿಯೊಬ್ಬನೂ ದೈಹಿಕವೋ ಮಾನಸಿಕವೋ ಆದ ಶ್ರಮದಿಂದ ಕೂಡಿದ ವೃತ್ತಿಯೊಂದನ್ನು ಅನುಸರಿಸಿ ಜೀವನಾವಶ್ಯಕವಾದ ದ್ರವ್ಯಸಂಪಾದನೆ ಮಾಡಬೇಕು. 2. ತಾನು ಅನುಸರಿಸುವ ವೃತ್ತಿಯನ್ನು ಪ್ರತಿ ವ್ಯಕ್ತಿಯೂ ತುಂಬ ನಿಷ್ಠೆ–ಪ್ರಾಮಾಣಿಕತೆಯಿಂದಲೂ ಪೂಜ್ಯ ಭಾವದಿಂದಲೂ ನಿರ್ವಹಿಸಬೇಕು ; ಅದೇ ನಿಜವಾದ ದೇವರ ಪೂಜೆ. 3. ತನ್ನ ಶ್ರಮದಿಂದಾದ ಉತ್ಪನ್ನವು ಎಷ್ಟು ಬೆಲೆ ಬಾಳುವುದೋ ಅಷ್ಟು ಹಣವನ್ನು ಮಾತ್ರ ಪಡೆಯಬೇಕೇ ಹೊರತು ಹೆಚ್ಚಾದುದನ್ನು ಸ್ವೀಕರಿಸಬಾರದು. 4. ತಾನು ಸತ್ಕಾರ್ಯದಿಂದ ಸಂಪಾದಿಸಿದುದನ್ನು ಸತ್ಪಾತ್ರರಿಗೂ ಇತ್ತು ತಾನೂ ಅನುಭವಿಸಬೇಕು ; ಹಣವನ್ನು ಭವಿಷ್ಯತ್ತಿನ ಚಿಂತೆಯಿಂದ ಕೂಡಿಡಬಾರದು. 5. ಎಲ್ಲ ವೃತ್ತಿಗಳೂ ಸಮಾನವಾದವು : ಅವುಗಳಲ್ಲಿ ಕೀಳು–ಮೇಲುಗಳಿಲ್ಲ ; ವ್ಯಕ್ತಿಯ ಮನೋಭಾವ ಹಾಗೂ ಕೌಶಲಗಳಿಗನುಗುಣವಾಗಿ ಕಾಯಕ

ಭೇದವುಂಟಾಗುತ್ತದೆಯೇ ಹೊರತು, ಅದೇ ವ್ಯಕ್ತಿಗೆ ತೋರಿಸುವ ಗೌರವಕ್ಕೆ ಕಾರಣಭೂತವಾಗಬಾರದು, ಎಂದರೆ ತಾರತಮ್ಯಕ್ಕೆ ನೆವವಾಗಬಾರದು.

ಈ ರೀತಿ ಶರಣರು ಕಲ್ಪಿಸಿದ ಕಾಯಕತತ್ವವು ತುಂಬ ಶ್ರೇಷ್ಠವಾದ ಒಂದು ವೈಚಾರಿಕವಾದ ಕಾಣಿಕೆಯಾಗಿದೆ. ಆದರೆ ಇದು ಕೇವಲ ವೈಚಾರಿಕವಾಗಿ ಅನುಸರಣಯೋಗ್ಯವೆನಿಸದೆ ವ್ಯರ್ಥವಾಗಿಲ್ಲ. ಎಲ್ಲವನ್ನೂ ಧಾರ್ಮಿಕ ಚೌಕಟ್ಟಿನಲ್ಲಿ ಹೆಚ್ಚು ಗೌರವದಿಂದ ಕಾಣುವ ಭಾರತೀಯರ ನಾಡಿಮಿಡಿತವನ್ನು ಬಲ್ಲ ವಚನಕಾರರು ಆರ್ಥಿಕ ಸಿದ್ಧಾಂತಕ್ಕೆ ಧಾರ್ಮಿಕ ಬಿಗಿಕಟ್ಟನ್ನು ಒದಗಿಸಿ ಅದು ಜನರ ಮನಸ್ಸನ್ನು ಆಳವಾಗಿ ನಾಟುವಂತೆ ಮಾಡಿದರು. ಈ ತತ್ವವು ಅನುಷ್ಠಾನಕ್ಕೆ ಬಂದರೆ ಒಬ್ಬರು ಇನ್ನೊಬ್ಬರನ್ನು ಶೋಷಿಸುವುದು ತಪ್ಪುತ್ತದೆ; ಇದರಿಂದ ಶ್ರಮಕ್ಕೆ ಗೌರವವು ಸಂದು ಕಷ್ಟಪಟ್ಟು ದುಡಿಯುವುದು ಹೆಮ್ಮೆಯ ವಿಚಾರವಾಗಿಯೂ ಇದರಿಂದ ಜೀವನ ಸಾರ್ಥಕ ಭಾವನೆಯೂ ಉಂಟಾಗುತ್ತದೆ. ಇಂತಹ ತತ್ವವೊಂದು ಹನ್ನೆರಡನೆಯ ಶತಮಾನದಲ್ಲಿ ಬೀರಿರಬಹುದಾದ ಪರಿಣಾಮವು ವ್ಯಕ್ತಿಗಳ ಹಂತದಲ್ಲಿ ಮಾತ್ರ ಆ ಕಾಲದ ಕೆಲವು ವಚನಕಾರರ ರಚನೆಗಳ ಮೂಲಕ ತಿಳಿಯಲವಕಾಶವಿದೆ. ಆದರೆ ಅವು ಆ ಕಾಲದ ಸಮಷ್ಟಿ ಜೀವನದ ಮೇಲೆ, ವೀರಶೈವವಲಯವನ್ನು ಮೀರಿದ ಕ್ಷೇತ್ರದ ಮೇಲೆ ಎಂತಹ ಪ್ರಭಾವವನ್ನು ಬೀರಿತೆಂಬುದರ ಬಗ್ಗೆಯಾಗಲೀ; ಈ ತತ್ವದ ಪ್ರೇರಕಶಕ್ತಿಯಾದ, ವಚನ ಚಳುವಳಿಯ ಕೇಂದ್ರವಾದ ಬಸವಣ್ಣನು ರಾಜಕೀಯವಾಗಿಯೂ ಪ್ರಭಾವಶಾಲಿಯಾಗಿದ್ದುದರಿಂದ ಈ ತತ್ವವು ರಾಜಕೀಯ ಕ್ಷೇತ್ರದ ಮೇಲೆ ತನ್ನ ಮಹತ್ವದ ಅಚ್ಚನ್ನೊತ್ತಿ ಆಗಿನ ಆರ್ಥಿಕ

ಧೋರಣೆಯ ಮೇಲೆ ಏನಾದರೂ ಪ್ರಭಾವ ಬೀರಿತೇ ಎಂಬುದಾಗಲಿ; ಈ ತತ್ವದ ಬಗ್ಗೆ ಆ ಕಾಲದ ರಾಜನೈತಿಕ-ಆರ್ಥಿಕ ಧುರೀಣರ ಪ್ರತಿಕ್ರಿಯೆ ಎಂತಹುದು ಎಂಬ ವಿಷಯದ ಬಗ್ಗೆಯಾಗಲೀ ನಮಗೆ ಯಾವುದೇ ಬಗೆಯ ಮಾಹಿತಿಯೂ ದೊರೆಯದಿರುವುದು ದುರದೃಷ್ಟಕರ.

**ಪ್ರಚಾರೋಪನ್ಯಾಸ ಮಾಲೆಯ ಕೆಲವು ಹೊತ್ತಿಗೆಗಳು**

| | |
|---|---|
| ನಕ್ಷತ್ರ ಲೋಕ | ಜಿ. ಟಿ. ನಾರಾಯಣರಾವ್ |
| ಹವಾನುಕೂಲನ ಮತ್ತು ಪ್ರಶೀತನ | ಕೆ. ವಿ. ಸುಬ್ಬರಾಯ |
| ಪಾನಿಯಗಳು | ಕೆ. ಎಸ್. ಲಕ್ಷ್ಮಣರಾವ್ |
| ಚಂದ್ರಲೋಕ ಯಾತ್ರೆ | ಪಿ. ಎಸ್. ವೆಂಕಟಸ್ವಾಮಿ |
| ಬೆಳಕಿನ ಸ್ವರೂಪ | ಬಿ. ವಿ. ನಾರಾಯಣರಾವ್ |
| ದೂರದರ್ಶನ | ಕೆ. ಶೇಷಾದ್ರಿ ಅಯ್ಯಂಗಾರ |
| ಸೂಕ್ಷ್ಮದರ್ಶಕಗಳು ಮತ್ತು ದೂರದರ್ಶಕಗಳು | ಕೆ. ಶೇಷಾದ್ರಿ ಅಯ್ಯಂಗಾರ |
| ಉಕ್ಕು : ತಯಾರಿಕೆ ಮತ್ತು ರಚನೆ | ಕೆ. ಆರ್. ಮೋಹನ್ |
| ನೀರಾವರಿ ಸಮಸ್ಯೆಗಳು | ಕೆ. ಎನ್. ಶಿವಶಂಕರರಾವ್ |
| ಅಂತರ್ಜಲ | ಸಿ. ನಾಗಣ್ಣ |
| ಮಾನವ ನಿರ್ಮಿತ ಧಾತುಗಳು | ಎಸ್. ವೆಂಕಟೇಶಮೂರ್ತಿ |
| ಕರ್ನಾಟಕ ಅಂತರ್ಜಲ ಸಂಪನ್ಮೂಲಾಭಿವೃದ್ಧಿ | ವೈ. ಲಿಂಗರಾಜು |
| ಮಾನವನ ಮೇಲೆ ಗ್ರಹಗಳ ಪ್ರಭಾವ ಉಂಟೆ? | ಎನ್. ಕೆ. ನರಸಿಂಹಮೂರ್ತಿ |
| ಅನುವಂಶೀಯತೆ ಮತ್ತು ವೈವಿಧ್ಯ | ಎಂ. ಎಸ್. ಎಸ್. ರಾವ್ |
| ದ್ಯುತಿ ವಿದ್ಯುತ್ ಪರಿಣಾಮ | ಕೆ. ನಾಗರಾಜನ್ |
| ಮಾನವ ಮತ್ತು ಪಾಚಿಗಳು | ವಿ. ಎಸ್. ಯಲವಿಗಿ |
| ಕಪ್ಪು ರಂಧ್ರಗಳು | ವಿ. ಟಿ. ಎಸ್. ಶರ್ಮ |